# ಮಾಂಗಲ್ಯ

## (ಸಾಮಾಜಿಕ ನಾಟಕ)




**ಚಿ. ಸದಾಶಿವಯ್ಯ**

ದೇಶೀಯ ವಿದ್ಯಾಶಾಲೆ, ಬೆಂಗಳೂರು-೪.





ಪ್ರಕಾಶಕರು :

ಆನಂದ್ ಬ್ರದರ್ಸ್

**ಬೆಂಗಳೂರು-೨.**

(ರಿಟೈರ್ಡ್) ಡಿಸ್ಟ್ರಿಕ್ಟ್ ಎಜುಕೇಷನಲ್ ಆಫೀಸರ್

**ಶ್ರೀಮಾನ್ ಜಿ. ಎಸ್. ಸುಬ್ಬರಾವ್, ಬಿ.ಎ.,**

ಇವರ ಸನ್ನಿಧಿಯಲ್ಲಿ.

ಆರ್ಯರೇ !

ತಮ್ಮ ಈ ತುಂಬುವಯಸ್ಸಿನಲ್ಲಿಯೂ ತಮ್ಮಲ್ಲಿ ನಾವು ಕಾಣುತ್ತಿರುವ ಕಾರ್ಯೋತ್ಸಾಹ, ಕಾರ್ಯತತ್ಪರತೆ, ಕಾರ್ಯಶ್ರದ್ಧಾಕೌಶಲ್ಯಗಳೂ ಕಿರಿಯರಾದ ನಮಗೆಲ್ಲರಿಗೂ ಸದಾ ಮಾದರಿಯಾಗಿರಲೆಂದೂ, ಜಗದೀಶ್ವರನು ತಮಗೆ ಆಯುರಾರೋಗ್ಯ ಭಾಗ್ಯಗಳನ್ನು ಕರುಣಿಸಿ, ಇನ್ನೂ ಹತ್ತಾರು ವರುಷಗಳು ನಮಗೆ ಹಿರಿಯರಾಗಿರುವ ಭಾಗ್ಯವನ್ನು ದಯಪಾಲಿಸಲೆಂದೂ ಬೇಡಿ ಈ ಚಿಕ್ಕಕೃತಿ:

**"ಮಾಂಗಲ್ಯ"**

ವನ್ನು

ತಮಗೆ ಶ್ರದ್ಧೆಯಿಂದ ಅರ್ಪಿಸಿದ್ದೇನೆ

ಸ್ವೀಕರಿಸಿರಿ

—**ಸದಾಶಿವ.**

ಈ ನಾಟಕವನ್ನು ಮೊಟ್ಟಮೊದಲು ದೇಶೀಯ ವಿದ್ಯಾಶಾಲಾ ಹಿರಿಯ ತರುಣ ಸಂಘದವರು ಶಾಲೆಯ ಸಭಾಂಗಣದಲ್ಲಿ 1935 ನೇ ಜನವರಿಯಲ್ಲಿ ಅಭಿನಯಿಸಿದಂದು ಪಾತ್ರವಹಿಸಿದ್ದ ನಟರು

| | | |
|---|---|---|
| ಶಾಮಣ್ಣ | ಊರಿನ ತರುಣ ಗೃಹಸ್ಥ | ಎಸ್. ನಾಗೇಶ್ ರಾವ್ ಬಿ.ಎ., |
| ರಂಗನಾಥರಾವ್ | ಅದೇ ಊರಿನಲ್ಲಿರುವ ಇನ್ಷೂರೆನ್ಸ್ ಏಜೆಂಟ್ | ಬಿ. ಎಸ್. ವೆಂಕಟರಾಂ |
| ಬಸವಯ್ಯ | ಶಾಮಣ್ಣನ ಮನೆಯಲ್ಲಿ ಹಿಂದೆ ಆಳಾಗಿದ್ದವನು (ಮುದುಕ) | ಸಿ. ಕೆ. ನಾಗರಾಜರಾವ್ |
| ನಂಜಯ್ಯ | ಶಾಮಣ್ಣನ ಮನೆಯಲ್ಲಿ ಹಿಂದೆ ಆಳಾಗಿದ್ದವನು (ಪೂರ್ವ ವಯಸ್ಸು) | ಚಿ. ಸದಾಶಿವಯ್ಯ |
| ಶಂಕರಶಾಸ್ತ್ರಿ | ಊರಿನ ಪುರೋಹಿತರು | ಕೆ. ಎಸ್. ವೆಂಕಟಾಚಲಯ್ಯ |
| ಸುಬ್ಬರಾಯಶಾಸ್ತ್ರಿ | ರಂಗನಾಥರಾಯನ ನೆಂಟ | ಡಿ. ಕೆ. ಸುಬ್ಬರಾವ್ |
| ಗರಡಿ ಕೆಂಚ | ನಂಜಯ್ಯನ ನೆಂಟ | ಸಿ. ಕೆ. ನಾಗರಾಜರಾವ್ |
| ಶೀನಪ್ಪ | ಶಾಮಣ್ಣನ ತಂದೆ | ಸರ್ಜಾಪುರದ ವೆಂಕಟಾಚಲಪತಿ |
| ಡಾ|| ಭೂಷಣ | ಊರಿನ ಡಾಕ್ಟರ್ | ಎನ್. [illegible]. ಲಕ್ಷ್ಮೀನಾರಾಯಣ್, ಬಿ.ಎಸ್‌ಸಿ., |
| ಸುಬ್ಬಮ್ಮ | ಶೀನಪ್ಪನ ಹೆಂಡತಿ | ಡಿ. ಕೆ. ಸುಬ್ಬರಾವ್ |
| ಸಾತಮ್ಮ | ಶಾಮಣ್ಣನ ತಂಗಿ (ಬಾಲ ವಿಧವೆ) | ಟಿ.ಎಸ್. ರಾಮರಾವ್ ಎಂ.ಎಸ್.ಸಿ., |
| ರತ್ನಮ್ಮ | ಶಾಮಣ್ಣನ ಹೆಂಡತಿ | ರಮೇಶ ಚಂದ್ರ ಭಾರದ್ವಾಜ್ |
| ಲಿಂಗಮ್ಮ | ಬಸವಯ್ಯನ ಹೆಂಡತಿ | ಸಿ.ಕೆ. ಶಂಕರನಾರಾಯಣರಾವ್ |

ದಿಗ್ದರ್ಶನ ಬಿ. ಎಸ್. ರಾಮರಾವ್, ಬಿ.ಎ.,

---

# ಮಾಂಗಲ್ಯ



## ಅಂಕ ೧–ದೃಶ್ಯ ೧

[ಕೆರೆಗೆ ಹೋಗುವ ದಾರಿಯಲ್ಲಿನ ಅಶ್ವತ್ಥಕಟ್ಟೆಯ ಪಕ್ಕ-ಇನ್ಷೂರೆನ್ಸ್ ಏಜೆಂಟ್ ರಂಗನಾಥರಾಯನೂ, ಆಳು ನಂಜನೂ ಇರುವರು. ರಾಯನಿಗೆ ಒಂದುಕಣ್ಣಿನ ಕನ್ನಡಕ-ಹ್ಯಾಟ್, ಸೂಟ್-ಕುಡಿಮೀಸೆ ತಿದ್ದಿರುವುದು. ಕೈಲಿ ಚರ್ಮದ ಚೀಲ. ನಂಜನು ತಲೆಗೆ ಕೆಂಪುವಸ್ತ್ರ ಸುತ್ತಿ, ಕಪ್ಪುಕುಡುತ ಧರಿಸಿ, ಮುಂಡಿ ಮೇಲಕ್ಕೆಪಂಚೆ ಉಟ್ಟು ಉತ್ಸಾಹದಿಂದ ರಾಯನನ್ನು ನೋಡುತ್ತಿರುವನು. ಸಮಯ ಪ್ರಾತಃಕಾಲ]

**ರಂಗ**— ನಂಜಾ!

**ನಂಜ**—(ವಿನಯದಿಂದ) ಬುದ್ದೀ!

**ರಂಗ**—ಏನು ಶೀನಪ್ಪನ ಮನೆ ಸಮಾಚಾರ?

**ನಂಜ**—ಶೀನಪ್ಪನೋರ ಮನೆ ಸಮಾಚಾರ ಇನ್ನೇನು ಬುದ್ಧೀ, ಈವತ್ತು ಸಂಜೆ, ಇಲ್ಲ ಅಪಾರಾಂದ್ರೆ ನಾಳೆ ಒತ್ತೀನೇಕಂಟ ಕಳೆದರೆ ಎಚ್ಚು ಗಂಡನ ಸಾವಸಂಕಟ ನೋಡಲಾರದೆ ಆ ಸುಬ್ಬವ್ವ ಗಾಳಕ್ಕೆ ಸಿಂಕ್ಕಂಡ ಮೀನಿನಂಗೆ ಮಿಲಮಿಲಮಿಲಾಂತ ಒದ್ದಾಡುತಾ ಅವರೆ. ಪಾಪ ಆ ಮಗ ಶಾಮಣ್ಣಾ–ಅವರ ಪಾಡು ನಾಯಿಪಾಡು . ಅದು ಸರೀ ಬುದ್ದಿ! ಈಗ ಮುಂದಕೆ ಎಂಗೇರ್ಪಾಟು?

**ರಂಗ**—ಹೆಂಗೇನೇರ್ಪಾಡು! ನಾಳೆ ಆ ಶೀನಪ್ಪ ಸತ್ತಮೇಲೆ ಅವರ ಜೊತೇಲಿ ಸ್ಮಶಾನಕ್ಕೆ ಹೋಗೋದು; ಅಲ್ಲಿಂದ ಡೆತ್ ಸರ್ಟಿಫಿಕೇಟು ತಗೊಂಡು ಹೋಗಿ ನಮ್ಮ ಹೆಡ್ಡಾಫೀಸಿಗೆ ಕಳಿಸೋದು, ಅನಂತರ ಹಣ ಬರುತ್ತೆ–ಅದು ಸರೀ, ನೀನು ಈಗ ಆ ಪಾಲಿಸೀ ಮೇಲೆ ಎಷ್ಟು ಹಣ ಕಟ್ಟಿದ್ದೀ?

**ನಂಜ**—(ಚಕಿತನಾಗಿ) ನೀವೇ ಏಳಿದರಲ್ಲ ಓದ ತಿಂಗಳು ಎಪ್ಪತ್ತೈದು ರೂಪಾಯೀಂತ! ಈಗ್ಯಾಕೆ ಬುದ್ಧೀ ಅದು?

**ರಂಗ**—(ಗಮನಿಸದವನಂತೆ) ಯಾಕೂ ಇಲ್ಲ—ಆ ಪಾಲಿಸಿ ಹಣ ಬಂದಮೇಲೆ ನಾನು ನಿನಗೆ ಎಷ್ಟು ಕೊಡಬೇಕಾಗುತ್ತೇಂತ ಕೇಳಿದೆ.

**ನಂಜ**—(ಗಾಬರಿಯಿಂದ) ಇದೇನು ಬುದ್ಧಿ? ನೀವು ನಂಗೆ ಕೊಡೋ ದ್ದೂಂಪ್ರೆ?

**ರಂಗ**—ಇದೇಕಯ್ಯಾ ಹೀಗೆ ಬೆಪ್ಪನಹಾಗೆ ಮಾತಾಡುತೀ! ಈಗ ಶೀನಪ್ಪ ಸತ್ತರೆ ಆ ಪಾಲಿಸೀ ಹಣ ಸಾವಿರರೂಪಾಯಿ ಬರೋದಿಲ್ಲವೇ?

**ನಂಜ**—ಹೌದೂ!

**ರಂಗ**—ಅದರ ಮೇಲೆ ನೀನು ಇದುವರೆಗೆ ಎಪ್ಪತ್ತೈದು ರೂಪಾಯಿ ಕಟ್ಟಿಲ್ಲವೇ?

**ನಂಜ**—ಔದೂ!

**ರಂಗ**—ನಾಳೆ ಆ ಸಾವಿರ ರೂಪಾಯಿ ನನ್ನ ಕೈಗೆ ಬಂದಮೇಲೆ...

**ನಂಜ**—ನನ್ನೆಸರಿನಾಗೈತಲ್ಲಾ ಬುದ್ಧೀ ಆ ಪತ್ರಾ?

**ರಂಗ**—ನಿನಗೆಲ್ಲೋ ಬುದ್ಧಿ ಸ್ವಾಧೀನವಿಲ್ಲಾ ಅಂತ ಕಾಣುತ್ತೆ ಅಲ್ಲವೋ, ಹೋದ ತಿಂಗಳು ಕಂತು ಕಟ್ಟೋದಕ್ಕೆ ನಿನ್ನಲ್ಲಿ ಒಂದು ಬಿಡಿ ಕಾಸೂ ಇಲ್ಲದೆ ಒದ್ದಾಡುತ್ತಿದ್ದಾಗ ನಾನು ಕಟ್ಟಲಿಲ್ಲವೇ?

**ನಂಜ**—ಹೌದೂ!

**ರಂಗ**—ಆವಾಗ ನೀನು ನಮ್ಮ ಆಫೀಸಿನಲ್ಲಿ ಒಂದು ಫಾರಂಗೆ ರುಜೂ ಮಾಡಲಿಲ್ಲವೇ?

**ನಂಜ**—ಅದೇ ಓದ ತಿಂಗಳ ಕಂತನ ನಿಮ್ಮಿಂದ ಸಾಲ ತಗೊಂಡಿ ನ್ನೀಂತ!

**ರಂಗ**—ಹಾಗಲ್ಲಯ್ಯಾ ಬೆಪ್ಪಣ್ಣ!

**ನಂಜ**—(ಗಾಬರಿಯಿಂದ) ಆಂಂಂ?

**ರಂಗ**—ಆ ಕಾಗದದಲ್ಲೀ ಈ ಪಾಲಿಸೀ ಸೊತ್ತೆಲ್ಲಾ ರಂಗನಾಥರಾಯ ರಿಗೇ ಸೇರಿದೇಂತ ಇದೆ-ತಿಳೀತೇ?

**ನಂಜ**—ಔದಾ ಬುದ್ಧೀ! ನೀವು ಮಕ್ಕಳೋರು, ಮರಿಯೋರು, ನೀವಿಂತಾ ಕೆಲಸ ಮಾಡಬೋದಾ ಬುದ್ಧೀ! (ಪಶ್ಚಾತ್ತಾಪ, ದುಃಖ, ಕ್ರೋಧ ದಿಂದ) ಸಾವಿರ ರೂಪಾಯಿ ಬರ್‍ತೈತೇನ್ನೋ ಆಸೆಯಿಂದ, ಮನೆಯಾಗಿದ್ದ ಬದ್ದ ದವಸಾನೆಲ್ಲಾ ಮಾರಿ, ಕಡೇಗಂಡರ ಕೊಳ್ಳಾಗಿನ ಮಂಗಳಸೂತ್ರ ಕೂಡ ಮಾರಿ ಕಡೇ ತಿಂಗಳ ಪಿರೀಮಿಯಂ ಕಟ್ಟಿದನಲ್ಲಾ ಬುದ್ಧೀ! ಶೀನಪ್ಪ ನೋರು ಸಾಯ್ತಾರೇಂತ ಕುಸೀಮ್ಯಾಗಿದ್ದನಲ್ಲ ಬುದ್ಧೀ! ನೀವಿಂತಾಕೆಲಸ ಮಾಡೋದಾ! ...

**ರಂಗ**—(ರೇಗಿ) ನಂಜಾ! ನೀನು ತಲೆಯೆಲ್ಲಾ ಹರಟಿ, ಬರೋ ದುಡ್ಡನ್ನೂ ಕಳಕೊಳ್ಳುತೀ ನೋಡು ಅಲ್ಲವೋ! ನಾನು ಡಾಕ್ಟರನ್ನ ಹೊಸದು, ಆ ರೋಗದ ಗೂಬೇ ಇನ್ಷೂರೆನ್ಸ್ ಹಿಡಿಯೋ ಹಾಗೆ ಮಾಡಿ, ಮುಳುಗಿ ಹೋಗುತಿದ್ದ ಅದಕ್ಕೆ ನನ್ನ ಕೈಯಿಂದ ಪ್ರೀಮಿಯಂ ಕಟ್ಟಿ ಅದನ್ನ ಉಳಿಸಿ, ಎಲ್ಲಾ ಮಾಡಿದರೆ, ಈಗ ನನ್ನಮೇಲೇ ಹಾರಾಡುತೀಯಾ" ಅಲ್ಲವೋ! ಈಗ ಅದಕ್ಕೆ ಪ್ರೀಮಿಯಂ ನನ್ನ ಕೈಯಿಂದ ಕಟ್ಟದೆ ಹೋಗಿ ದ್ದರೆ ಆ ಸಾವಿರ ರೂಪಾಯಿ ಯಾರಿಗೂ ದಕ್ಕುತಿರಲಿಲ್ಲ ಅಲ್ಲವೇನೋ"

**ನಂಜ**—(ನಿರಾಶನಾಗಿ) ಔದೂ!

**ರಂಗ**—ಮತ್ತೆ ಅದನ್ನ ಉಳಿಯೋ ಹಾಗೆ ಮಾಡಿದೋರು ಯಾರಯ್ಯಾ?

**ನಂಜ**—(ಸುಮ್ಮನಿರುವನು)

**ರಂಗ** ನಾನಲ್ಲವೇನೋ? ಮಾತಾಡು!

**ನಂಜ**—(ಸಿಡಿವ ಕ್ರೋಧವನ್ನು ತಡೆದು) ಔದು ಬುದ್ಧೀ!

**ರಂಗ**—ಮತ್ತೀಗ ಈ ಹಣ ಯಾರಿಗೆ ಸೇರಬೇಕು?

**ನಂಜ**—(ದುಃಖ ನಿರಾಶೆಯಿಂದ) "ಬಡಪಾ ಬುದ್ಧೀ! ತಮ್ಮಸರೇಳಿ ಕೊಂಡು ಬದೀಕೊತೀನಿ ಬುದ್ಧೀ 'ಂತ ನಾನು ಏಳಿದ್ದ ಕಲ್ಲವ ಅಸರು ನನ್ನೆಸ ರಿಗೆ ಮಾಡಿಕೊಟ್ಟಿದ್ದು ಪತ್ರಾವಾ"

**ರಂಗ**—ಎಲ್ಲೋ! ಅವನೇ ಪ್ರೀಮಿಯಂ ಕಟ್ಟೋದಕ್ಕಾಗದೆ ಬಿಟ್ಟು ಬಿಟ್ಟಿದ್ದನಲ್ಲೋ! ನಿನಗೇನುಪಕಾರ ಮಾಡಿದಹಾಗಾಯಿತು?

**ನಂಜ**— (ಮೇಲಿನ ಧ್ವನಿಯಲ್ಲೇ) ಆಮೇಕೆ ನೀವೇ ಏಳಿದಿರೀಂತ ಮನೇಲಿದ್ದಬದ್ದ ದವಸಾನೆಲ್ಲಾ ಮಾರಿ ಪಿರೀಮಿಯಂ ಕಟ್ಟಿದನೆ, ಸಾವಿರ ರೂಪಾಯಿ ಬರುತ್ತೈತೇಂಬೋ ಆಸೆಯಿಂದ ಇಲ್ಲದಿದ್ದರೆ (ಸಂತಾಪದಿಂದ) ಎಂಡರಕೊಳ್ಳಾಗಿನ ಮಂಗಳಸೂತ್ರ ಕಳೀತಿದ್ದ ಶಂಡಾಲ ಯಾರು ಬುದ್ದೀ!

**ರಂಗ**— ನಂಜಾ! ನೋಡೀಗ, ನೀನು ತಲೆಹರಟೆ ಮಾಡಿ ಬರೋ ದುಡ್ಡಿಗೂ ಕಲ್ಲು ಹಾಕ್ಕೋತೀ ನನ್ನ ಮಾತು ಕೇಳು ನಾಳೆ ದುಡ್ಡು ಬಂದಮೇಲೆ ನಿನಗೆ ಎಪ್ಪತ್ತೈದು ರೂಪಾಯಿಗೆ ಬದಲಾಗಿ ನೂರು ರೂಪಾಯಿ ಕೊಟ್ಟುಬಿಡುತೀನಿ ನೀನು ಒಂದು ದೊಡ್ಡ ಮಾಂಗಲ್ಯ ಮಾಡಿಸಿ, ನಿನ್ನ ಹೆಂಡತಿ ಕೊರಳಿಗೆ ಶುಭಮುಹೂರ್ತದಲ್ಲಿ ಕಟ್ಟಿಬಿಡು. ಅದು ಸರೀ! ಈಗ ಆ ಬಸವಯ್ಯನ ಸಮಾಚಾರ ಏನು ಮಾಡಿದೆ?

**ನಂಜ**— ನಂಗೆ ಬ್ಯಾಡಿ ಬುದ್ದಿ ಈ ಅನ್ಯಾಯದ ಕೆಲಸ

**ರಂಗ**— ಅಲ್ಲವೋ, ನಿನ್ನ ಬುದ್ದಿಗೆ ನಾನು ಏನು ಹೇಳಲೋ! ಬಸವಯ್ಯ ಅವನ ಹತ್ತಿರ ಇದ್ದಬದ್ದದ್ದನ್ನೆಲ್ಲಾ ಆ ಶೀನಪ್ಪನ ಸಂಸಾರಕ್ಕೆ ತೆತ್ತು ಕೂತಿದ್ದಾನೆ ನಾನು ಹೇಳಿದಹಾಗೆ ಅವನಿಗೆ ಉಂಡೇಗಂಟು ಸಿಕ್ಕೋ ವಿಚಾರ ತಿಳಿಸಿ, ಒಂದೈನೂರು ರೂಪಾಯಿಗೆ ಇಹಸೂರ್ ಮಾಡೋಹಾಗೆ ಮಾಡು-ಇದರಿಂದ ನಿನಗೂ ಕೂತ

[ಬಸವಯ್ಯನ ಪ್ರವೇಶ-ವೃದ್ಧ, ಹರಕು ಅಂಗಿ, ಹಳೆ ಪೇಟ, ಮಾಸಿದ ಪಂಚೆ]

**ಬಸವ**— ನಮಸ್ಕಾರ ಬುದ್ದೀ-ಚೆಂದಾಗಿದ್ದೀರಾ?

**ರಂಗ**— ಹೂಂನಪ್ಪ ನಿನ್ನ ದಯದಿಂದ.

**ಬಸವ**— ಅಯ್ಯೊ ಅಯ್ಯೊ!! ತಾವು ನಮ್ಮ ಗುರುಗೋಳು-ತಮ್ಮ ದಯ ಇರಬೇಕು ಬುದ್ದೀ (ನಂಜನಕಡೆ ತಿರುಗಿ) ಏನು ನಂಜಣ್ಣಾ? ರಾಯರ ಕೂಡ ಒಂಟಿದ್ದೀಯಾ?

**ನಂಜ**— ಔದಪ್ಪಾ-ನಾನು ಕೆರೇಕಡೆಯಿಂದ ಬತ್ತಿದ್ದೆ. ರಾಯರೂ ಕಛೇರಿಕಡೆ ಒಂಟಿದ್ರು ಅದು ಸರಿ, ನಮ್ಮ ರಾಯರ ಮನೆ ಸಮಾಚಾರ ಏನಪ್ಪಾ?

**ಬಸವ**— ಅಯ್ಯೊ! ನಮ್ಮ ರಾಯರ ಮನೆ ಸಮಾಚಾರ ಏಳಾಕೆ

ಬಾರದು  ನಾನೂ, ನಮ್ಮಪ್ಪ, ನಿಮ್ಮಪ್ಪ, ಅವ್ವ ಉಂಡು ತಿಂದು ತೇಗಿದ ಮನ್ಯಾಗೆ ಈವತ್ತು ತಿನ್ನಾಕೆ ನಾಲ್ಕಾಳು ಅಕ್ಕಿ ಇಲ್ಲ, ತಿರಿಯಾಕೆ ಒಂದು ಚೊಂಬಿಲ್ಲ. ಮಾರಾಯರು ತಾಸೀಲ್ದಾರ್ರು ಕಿಟ್ಟಪ್ಪನೋರು ಸಾಯೋವಾಗ ನಿಂಗೆ ನೆಪ್ಪಿ ಐತ ನಂಜಣ್ಣ? ಏಸೊಂದು ಪಿರಂಗಿ ಜನ, ಪೋಲೀಸನೋರು, ಸಾಯೇಬ್ರುಗಳೂ ಎಲ್ಲಾ ಬಂದು ಸುತ್ತಾ ನಿಂತಿದ್ದು, ಕೊನೇಗೆ ನೂರಾರು ಊವಿನಾರ ತಂದಾಕಿ ಮರ್ಯಾದೆ ಮಾಡಿದರು  ಮಸಾಣಕ್ಕೋಗೋವಾಗ ಇಂದ್ಯೈನೂರು ಜನ, ಮುಂದ್ಯೈನೂರು ಜನ  ಈಗ ನೋಡು; ಅದೇ ಕಿಟ್ಟಪ್ಪ ನೋರ ಮಗ ನಾವೆತ್ತಿ ಸಾಕಿದ ಶೀನಪ್ಪ, ಅದೇ ಮುರುಕಲ ಮಂಚದಮ್ಯಾಗೆ ನಾಯ್ತಾ ಅವರೆ  ಪಕ್ಕದಾಗೆ ಆ ಬಡಪಾಯಿ ಶಾಮಣ್ಣ  ಕಾಲ್ದಸೀಲಿ ನಮ್ಮವ್ವ ಸುಬ್ಬವ್ವ  ಶಾವೇಗೆ ಒಟ್ಟೆತಣ್ಣನೆ ಮಾರಾಯಿತಿ ಪಾತವ್ವ

**ರಂಗ**—ಪಾತವ್ವ ಯಾರಯ್ಯ?

**ನಂಜ**—ಅದೇ ಬುದ್ದಿ ಆ ಶಾಮಣ್ಣೋರ ತಂಗಿ, ಆ ಮನೇ ತಪ್ಪಿ ದೋರು

**ರಂಗ**—ಅದೇ! ಹೋದ ವರುಷ ಮೈತುಂಬ ಒಡವೆ ಹಾಕ್ಕೊಂಡು ಓಡಾಡುತ್ತಿತ್ತಲ್ಲ ತೆಳ್ಳನೆ ಬೆಳ್ಳನೆ ಹುಡುಗಿ?

**ಬಸವ**—ಔದು ಬುದ್ದೀ–ಅದೂ ಮನೇ ತಪ್ಪಿ ಬಂದು ಎಂಟು ತಿಂಗ ಳಾದೋ-ಆ ಒಡವೆ ವಸ್ತಾನೂ ಇಲ್ಲದಿದ್ದರೆ ಶೀನಪ್ಪನೋರು ಸತ್ತು ಒಂದಾರು ತಿಂಗಳಾಗುತಿದ್ದೋ-

**ರಂಗ**—ಹಾಗಂದ್ರೆ!

**ನಂಜ**—ಅಂಗಂದ್ರೆ ಆ ಒಡವೆ ವಸ್ತಾನೂ, ಆ ಜಲ್ಡಿ ಸಂಸಾರದ ತೂತು ಮುಚ್ಚಕಾಯ್ತೂಂತ

**ರಂಗ**—ಅದೇನು ಹೆಚ್ಚಯ್ಯಾ, ನಮ್ಮ ಬಸವಯ್ಯನೇ ತನ್ನದನ್ನೆಲ್ಲಾ ತಗೊಂಡೋಗಿ ತೆತ್ತಿರೋವಾಗ.

**ಬಸವ**—ಬುದ್ದೀ! ಆ ಮನೆ ಅನ್ನ ತಿಂದು ಬೆಳೆದ ನನ್ನ ಸಂಸಾರ ನನ್ನ ಮೈ. ಅವರ ತಂದೆಗೋಳು ಮಾಡಿದುಪಕಾರಕ್ಕೆ ನಾವೇನು ಮಾಡೇವು ಬುದ್ದೀ  ಮೊನ್ನೆ ರಾತ್ರೆ ಕಡೇಗೆ ಡಾಕಟ್ರಿಗೆ ಕೊಡಾಕೆ ಕಾಸಿಲ್ಲದೆ ಅವರು

ನೋಡಾಕೆ ಬರಾಕಿಲ್ಲಾಂದಾಗ ನನ್ನೆಂಡರು ಸಿಂಗಿ ತನ್ನ ಕೈಯಾಗಿದ್ದ ಕಡಗ ತಗೊಂಡ್ಹೋಗಿ, ಗೌಡನ ಮನ್ಯಾಗಿಟ್ಟು ರೂಪಾಯಿ ತಂದುಕೊಟ್ಟಳು ಬುದ್ಧೀ ಅವಳ ಬಕ್ತೀನ ನೋಡಿ ಶೀನಪ್ಪನೋರ ಕಣ್ಣಾಗೆ ನೀರು ಬಂದು " ಸಿಂಗೀ, ಬಸವ! ನೀವು ನನ್ನ ಇಂದಿನ ಜಲಮ್ದ ತಂದೆ-ತಾಯಿಗಳು ಆದರೆ ನಿಮ್ಮ ಪಿರೀತಿಯಿಂದ ಕೂಡ ನಾನು ಉಳಿಯಾಕಿಲ್ಲಾ " ಅಂದರು ಪಾಪ! ನಿನ್ನೆ ರಾತ್ರಿಯೆಲ್ಲಾ ಅವರ ಸಂಕಟ ನೋಡಬಾರದೂ ಬುದ್ಧೀ!

**ರಂಗ**— (ನಂಜನ ಕಡೆಗೆ ತಿರುಗಿ ಗತ್ತಿನಿಂದ) ನೋಡಿದೆಯೇನೋ ನಂಜಾ! ಸ್ವಾಮಿ ಭಕ್ತಿಂದರೆ ಅದು-

**ನಂಜ**— (ಕೋಪವನ್ನು ನುಂಗುತ್ತಾ) ಔದು ನನ್ನೊಡೆಯಾ

[ಶಂಕರಶಾಸ್ತ್ರಿಗಳ ಪ್ರವೇಶ-ವೃದ್ಧಾಪ್ಯವು ತಲೆದೋರಿದ್ದರೂ ತೇಜ ಪುಂಜವಾದ ಮುಖ. ಹಣೆಯಲ್ಲಿ ವಿಭೂತಿ. ಕಣ್ಣುಗಳಲ್ಲಿ ಕ್ಷಮಾ ಶಾಂತಿಗಳ ಕಾಂತಿ. ಶುಭ್ರವಾದ ಧೋತ್ರವನ್ನುಟ್ಟು, ಶಾಲು ಹೊದೆದು, ಕೈಲಿ ಪುಸ್ತಕವೊಂದನ್ನು ಹಿಡಿದಿರುವರು.]

**ಬಸವ-ನಂಜ**— ಪಾದಕ್ಕೆ ಬಿದ್ವಿ ಬುದ್ಧೀ!

**ಶಂಕರ**— ಸುಖವಾಗಿ ಬಾಳಿರಪ್ಪಾ! ಸೌಖ್ಯವೇ ರಾಯರು?

**ರಂಗ**— ತಮ್ಮಾಶೀರ್ವಾದದಿಂದ. ಏನು ನಮ್ಮ ಸುಖ ವಿಚಾರಿಸುತ್ತಾ ಇರೋದರಲ್ಲಾಯಿತೇ ಹೊರತು, ಆದರಕಡೆ ತಮ್ಮ ದಯವೇನೋ ಬರಲಿಲ್ಲ

**ಶಂಕರ**— ಹಾಗಂದ್ರೇನು ರಾಯರೇ! ತಮ್ಮ ಸುಖಕ್ಕೆ ನನ್ನಿಂದೇನು ಆಗಬೇಕಾಗಿದ್ದರೂ ಅಗತ್ಯವಾಗಿ ಮಾಡಿಕೊಡುತೇನೆ ಹೇಳಿ

**ರಂಗ**— ಹೊಸದೇನೂ ಇಲ್ಲ ಹಿಂದೇನೇ ನಾನು ನಿಮ್ಮಲ್ಲಿ ವಿಜ್ಞಾಪಿಸಿ ಕೊಂಡಿದ್ದೇನಲ್ಲ, ಈಗ ನೀವೊಂದು ಸಾವಿರರೂಪಾಯಿ ಪಾಲಿಸಿ ತಕೊಳ್ಳೀಂತ ನೋಡಿ-ನಮ್ಮ ಕಂಪೆನಿ ಸ್ವದೇಶೀ ಕಂಪೆನಿ, ನಮ್ಮೋರಾಡಳಿತವೇ ಎಲ್ಲಾ ಮಹಾತ್ಮ ಗಾಂಧಿಯವರುಕೂಡ ಹೊಗಳಿಬಿಟ್ಟಿದ್ದಾರೆ ಹೋದ ವರ್ಷ ಹದಿನಾರರಂತೆ ಬೋನಸ್ ಹಂಚಿದೆವು ನಮ್ಮ ಕಂಪೆನಿ ಮೂಲಧನ (ಹೇಳುತ್ತಾ ಚೀಲವನ್ನು ಬಿಚ್ಚಿ ಪ್ರಾಸ್ಪೆಕ್ಟಸ್ ಪುಸ್ತಕವನ್ನು ತೆಗೆಯುವನು)

**ಶಂಕರ—** ನಿಮ್ಮ ಕಂಪೆನಿಯೋನೋ ಸ್ವದೇಶಿಯೇ ಇರಬಹುದು, ಆದರೆ ನೀವುಮಟ್ಟಿಗೆ

**ರಂಗ—** ನೋಡಿ - ನಾನು ಗಾಂಧಿಹಾಗೆ ಇದ್ದುಬಿಡುತ್ತಿದ್ದೆ, ಆದರೆ ನಮ್ಮ ಬಿಸಿನೆಸ್ಸಿಗೆಲ್ಲಾ ಪರದೇಶಿ ವೇಷಾನೇ ಹಾಕಬೇಕು **ನೋಡಿ** ಇನ್ಷೂರೆನ್ಸ್ ಅನ್ನೋದು

**ಶಂಕರ—** ರಾಯರೇ, ನಾವು ಏನೂ ವರಮಾನವಿಲ್ಲದೆ, ನಿಮ್ಮಂಥಾವರ ಆಶ್ರಯದಲ್ಲಿ ಜೀವನ ಮಾಡೋರು ನಮಗೆ ಸಾಧ್ಯವಾದ್ದಲ್ಲ ಈ ಇನ್ಷೂರೆನ್ಸ್ ಇದು ಬಿಟ್ಟು ಇನ್ನೇನಾದರೂ ಇದ್ದರೆ ಹೇಳಿ; ಅಗತ್ಯವಾಗಿ ಮಾಡಿಕೂಡುತ್ತೇನೆ

**ರಂಗ—** ಇನ್ನೇನಿದೆ ಆಂ, ನಿಮ್ಮಲ್ಲಿ ಇನೊಂದು ವಿಚಾರ ಪ್ರಸ್ತಾಪಿಸಬೇಕೂಂತಿದ್ದೆ ಬಂದೇ-(ನಂಜನಕಡೆ ತಿರುಗಿ) ನಂಜಾ! ನೀನು ಇನ್ನು ಹೊರಡು, ಸಂಜೇಗೆ ಮನೆಹತ್ತಿರ ಬಾ—

**ನಂಜ—** ಸರೀ ಬುದ್ದೀ-(ಅವನಕಡೆ ದುರದುರನೆ ನೋಡುತ್ತಾ ನಿಷ್ಕ್ರಮಿಸುವನು)

**ಶಾಸ್ತ್ರಿ—** ಏನು ಬಸವಯ್ಯ! ರಾಯರು ಹ್ಯಾಗಿದಾರೆ?

**ಬಸವ—** ಬೆಳಗಿನ ಜಾಮದಿಂದ ಉನಾರಾಗೇ ಅವರೆ, ಆದರೆ ಇನ್ನೊಂದುಸಲ ಮೂರ್ಛೆ ಬಂದರೆ ಕಷ್ಟಾಂತ ಏಳವರೆ ಬುದ್ಧಿ ಡಾಕಟ್ರು

**ಶಾಸ್ತ್ರಿ—** ನಡೀ ನಾನೂ ಅಲ್ಲಿಗೇ ಬರುತೇನೆ.

[ಬಸವಯ್ಯನು ನಿಷ್ಕ್ರಮಿಸುವನು.]

**ರಂಗ—** ನಾನು ಈಗ ಕೇಳೋ ಮಾತುಗಳನ್ನು ತಾವು ತಪ್ಪು ಅಭಿಪ್ರಾಯ ಮಾಡಿಕೊಳ್ಳೋದಿಲ್ಲತಾನೇ?

**ಶಂಕರ—** ನನ್ನ ಸ್ವಭಾವ ನಿಮಗಿನ್ನೂ ತಿಳೀದು, ಹೇಳಿ ಚಿಂತೆಯಿಲ್ಲ

**ರಂಗ—** ಈಗ ಶಾಮಣ್ಣನ ತಂಗಿ ಪಾತಮ್ಮ ಇದೆಯಲ್ಲಾ, ಆ ಹುಡುಗಿ ವಯಸ್ಸೆಷ್ಟು?

**ಶಂಕರ—** ಹದಿನೆಂಟು ತುಂಬಿತು ಮೊನ್ನೆ ಮಾಘ ಮಾಸಕ್ಕೆ.

**ರಂಗ**— ಆ ಹುಡುಗಿ ಸಂಸಾರ ಸುಖ ಹದಿನೆಂಟು ವರ್ಷ ವಯಸ್ಸೀಗೆ ಮುಗಿದುಹೋಯಿತೇ ?

**ಶಂಕರ**— ಮುಗಿದುಹೋಗಿದೆಯಲ್ಲಾ.

**ರಂಗ**— ಏನು ಶಾಸ್ತ್ರಿಗಳೆ ನೀವು ಅಪ್ಪಣೆ ಕೊಡಿಸೋದು ! ಅದೂ ಉಪ್ಪು, ಹುಳಿ, ಖಾರ ತಿನ್ನೋದೇಹ, ನಮಗೆ ಅನ್ನಿಸಿದಹಾಗೆಯೇ ಅದಕ್ಕೂ ಅನ್ನಿಸೋದಿಲ್ಲವೇ ?

**ಶಂಕರ**— ಖಂಡಿತವಾಗಿಯೂ ಇಲ್ಲ ನೋಡೀ ಪ್ರಪಂಚದಲ್ಲಿ ಎಲ್ಲರೂ ಉಪ್ಪು, ಹುಳಿ, ಖಾರ ತಿಂದರೂ ಜೀವಗಳ ಸಂಸ್ಕಾರ ಬಗೆಬಗೆಯಾಗಿರುತ್ತೆ ಆ ಪಾತಮ್ಮ ದೈವೀಸಂಪತ್ತಿನಿಂದ ಕೂಡಿದ ದೊಡ್ಡ ಜೀವ ಅವಳು ತನ್ನ ಸ್ಥಿತಿಗಾಗಿ ಭಗವಂತನಿಂದ ಕೂಡ ದಯ ಕೋರೋಳಲ್ಲ ನಿರ್ಮಲವಾದ ಮನಸ್ಸು; ಶುಭ್ರವಾದ ಹೃದಯ ರಾಯರೇ, ಆಕೆಯ ವಿಚಾರವನ್ನು ತಿಳಿಯುವುದು ನಿಮ್ಮಂಥಾವರಿಗೆ ಕಷ್ಟ— ಆ ಮಾತು ಬಿಡಿ

**ರಂಗ**— ಸ್ವಾಮಿ ! (ರೇಗಿ) ಇದು ಸತ್ಯಯುಗವಲ್ಲ, ಕಲಿಯುಗ (ಅಣಕಿಸುವ ಧ್ವನಿಯಲ್ಲಿ) ತಪಸ್ಸು ಮಾಡುವೆನೆಂದು ಹಠಮಾಡಿ ಹೊರಟ ಕೂಡಲೇ ಓಡಿಬಂದು ಕೇಳಿದ ವರವನ್ನು ಕೊಟ್ಟು ಮಾಯವಾಗುತ್ತಿದ್ದ ಸುಳ್ಳುದೇವರ ಕಾಲವಲ್ಲ. ಪುಷ್ಪಕ ವಿಮಾನಗಳಲ್ಲಿ ಕುಳಿತು ವಿಹರಿಸುತ್ತಿದ್ದ ಯಕ್ಷ, ಗಂಧರ್ವ, ಕಿನ್ನರ ಕಿಂಪುರುಷರ ಕಾಲವಲ್ಲ. ಇದು ಕಲಿಯುಗ ಸ್ವಾಮಿ ! ಕಲಿಯುಗ !

[ಬಸವಯ್ಯನು ಓಡುತ್ತಾ ಬರುವನು]

**ಶಂಕರ**— (ಆತುರದಿಂದ) ಏನು ಬಸವಯ್ಯ ?

**ಬಸವ**— (ಏದುತ್ತಾ ಗದ್ಗದಸ್ವರದಿಂದ) ತಮ್ಮನ್ನೇ ಕೂಗ್ತಾಅವರೆ ಬುದ್ಧೀ !

**ಶಂಕರ**— ಬಸವಯ್ಯಾ ! ತೊಟ್ಟೀ ಕೃಷ್ಣಪ್ಪನೋರ ಮನೇ ಗೊತ್ತೇನೋ ಕೋಟೀಲಿ ?

**ಬಸವ**— ಅದೇ ಆ ಮದುವೆ ಚಪ್ಪರ ಆಕವರಲ್ಲ ಅದೇಯಾಬುದ್ದೀ ?

**ಶಂಕರ**— ಹೂಂ ಅದೆ. ನೀನು ಈಗ ಅಲ್ಲಿಗೆ ಹೋಗಿಬಿಟ್ಟು " ಅವರು ನಿನ್ನೆ ಸೂಕ್ಷ್ಮ ಕೊಟ್ಟಿದ್ದಹಾಗೆ ಮದುವೆ ಕೆಲಸಕ್ಕೆ ಬರೋಹಾಗಿಲ್ಲ; ಅದಕ್ಕೆ ಆ ದುಂಡದ ಶಾಸ್ತ್ರೀನ ಕರೆಸಿಬಿಡಬೇಕಂತೆ" ಅಂತ ಹೇಳಿ, ಜಾಗ್ರತೆ ಬಂದು ಬಿಡು. ನಾನು ಸೀದಾ ರಾಯರ ಮನೇಗೇ ಹೋಗ್ತೇನೆ

**ಬಸವ**—ಆಗಲಿ ಬುದ್ದೀ! (ನಿಷ್ಕ್ರಮಣ)

**ಶಂಕರ**—(ಇತ್ತ ತಿರುಗಿ) ರಾಯರೇ! ತಮ್ಮನ್ನ ತಿರುಗಿ ನೋಡ್ತೇನೆ (ನಿಷ್ಕ್ರಮಣ)

**ರಂಗ**—(ಅತ್ತ ಕಡೆಯೇ ನೋಡುತ್ತಿದ್ದು ಶಾಸ್ತ್ರಿಯು ಕಣ್ಮರೆಯಾದ ನಂತರ ಅಟ್ಟಹಾಸದ ನಗುವನ್ನು ಬೀರಿ) ಪ್ರಪಂಚದಲ್ಲಿ ಇಂಥಾವರಿನ್ನೂ ಜೀವಿಸಿರೋಹೊತ್ತಿಗೇನೆ ನಮ್ಮಂಥಾವರ ಬಿಸಿನೆಸ್ಸು ಜರುಗುತಿರೋದು ಹತ್ತುಲಕ್ಷ ರೂಪಾಯಿನ ಆಸ್ತಿವಂತ ತೊಟ್ಟೀಮನೆ ಕೃಷ್ಣಪ್ಪ ಅವನ ಮಗಳ ಮದುವೆಪೌರೋಹಿತ್ಯಾಂದರೆ, ಕನಿಷ್ಟಪಕ್ಷ ಒಂದ್ನೈನೂರು ರೂಪಾಯಿ ಸಂಪಾದನೆ-ಸಂಭಾವನೇನ ಬಿಟ್ಟು-ಇಂಥಾ ಮಹದಾಶ್ರಯ ಕೈಬಿಟ್ಟು ಆ ಪಾಪರ್ ಚೀಟಿ ಶೀನಪ್ಪನ ಶ್ರಾದ್ಧಕ್ಕೆ ತಲೆಕೊಡ್ತಾ ಇದೆಯಲ್ಲಾ ಈ ಪೆಚ್ಚು ಶಾಸ್ತ್ರಿ ಹಹ್ಹಾ ! (ತಿರಸ್ಕಾರದ ಹುಸಿನಗು) ಈ ದಿನವೇ ಅವರ ಮನೆದೇವರ ಸಮಾರಾಧನೆ. ಆ ದುಂಡದ ಶಾಸ್ತ್ರಿ ಒಂಟಿ ಕಣ್ಣಿನ ಶುಕ್ರಾಚಾರಿ, ಅಲ್ಲದೆ ಆ ಒಕ್ಕಲಿಗರೋಳನ್ನ ಬೇರೆ ಮನೇಲಿ ಇಟ್ಟುಕೊಂಡಿದಾನೆ ಅವನ ಪಾಲಿ ಸೀನ ಕೂಡ ವೊನ್ನೆ ಅವಳ ಹೆಸರಿಗೇನೆ ಬದಲಾಯಿಸಿದ ಇದರ ಆಧಾರದ ಮೇಲೆ ಅವನನ್ನ ಕರೆಸೋದು ಅನ್ಯಾಯಾಂತ ಕೃಷ್ಣಪ್ಪನವರಿಗೆ ಮನದಟ್ಟು ಮಾಡಿಸಿ, ಆ ಪಟ್ಟಕ್ಕೆ ವೆಲ್ಲಗೆ ನಮ್ಮ ಸೋದರಮಾವನ ಮಗ ಸುಬ್ಬರಾಯ ಶಾಸ್ತ್ರೀನಾದರೂ ಏರಿಸಿದರೆ, ಒಂದ್ನೈನೂರು ರೂಪಾಯಿ ಪಾಲಿಸೀನಾದರೂ ಎತ್ತಬಹುದು-ಕಮೀಷನ್ ಸಿಗದಿದ್ದರೆ ಜೊತೇಗೇ ಮದುವೇಮನೆ ಊಟ, ಉಪಚಾರ, ವಾಲಗ, ಸುಗಂಧ ಇತ್ಯಾದಿ ಇತ್ಯಾದಿಗಳ ಮಧ್ಯೆ ಹತ್ತಾರು ಜನರ ಸಂಗಡ ಒಂದೆಂಟು ದಿನ ಮಜನಾಗಿ ಕಾಲ ಹಾಕ್ಕೊಂಡು ಇರಬಹುದು ನಾನು ಈಗಲೇ ಹೋಗಿ ತೊಟ್ಟೀಮನೆ ಕೃಷ್ಣಪ್ಪನೋರನ್ನ ಕಾಣುತೇನೆ—

ಸೀನಪ್ಪನ ಸಾವಿರ ರೂಪಾಯಿ ಪಾಲಿಸೀಂತೂ ಈವತ್ತೇ ಮೆಚೂರಾದಹಾಗೇ! ಕೊಡೋ ದೇವರು ಯಾವ ಯಾವಾಗ, ಎಲ್ಲೆಲ್ಲಿ, ಹೇಗೆ ಹೇಗೆ ಕೊಡುತಾನೋ ಯಾರುಬಲ್ಲರು—

(ಗದ್ದ ಹುಂಜದಂತೆ ನಿಷ್ಕ್ರಮಣ)



## ಅಂಕ ೧ – ದೃಶ್ಯ ೨

[ಶೀನಪ್ಪನ ಮನೆಯ ಕೈಸಾಲೆ. ಎದುರು ಗೋಡೆಯ ದೊಡ್ಡ ಮುರುಕು ಕಿಟಕಿಯಲ್ಲಿ ಹಿಂದಿನ ಹಾಳುಬಿದ್ದಿರುವ ಮುರುಕಲು ಮಹಾಲು, ಮಹಡಿ ಸ್ವಲ್ಪ ಸ್ವಲ್ಪ ಕಾಣಬರುತ್ತವೆ. ಗೋಡೆಯಲ್ಲಿ ದೊಡ್ಡ ದೊಡ್ಡ ಹಳೆಯ ಫೋಟೋಗಳು ತೂಗುಹಾಕಲ್ಪಟ್ಟಿವೆ. ಕೈಸಾಲೆಯ ಮಧ್ಯದ ಮುರುಕು ಮಂಚದ ಮೇಲಿನ ಹರಕು ಹಾಸಿಗೆಯಲ್ಲಿ ಬೆಳೆದ ಗಡ್ಡ ಮೀಸೆ, ಕಳೆಗುಂದಿದ ಬಾಡಿದ ಮುಖದ ಶೀನಪ್ಪನು ನರಳುತ್ತಾ ಮಲಗಿರುವನು. ಮಂಚದ ಕೆಳಗಡೆ ಬೆಡ್‌ಪ್ಯಾನ್, ಎನೀಮಾಡಬ್ಬ, ನೀರಿನ ತಂಬಿಗೆಗಳಿವೆ. ಮಂಚದ ಪಕ್ಕದಲ್ಲಿ ಮುಕ್ಕಾಲು ಮಣೆಯ ಮೇಲೆ ಔಷಧಿ ಶೀಸೆ, ಔನ್ಸ್ ಗ್ಲಾಸುಗಳಿವೆ. ಶೀನಪ್ಪನ ತಲೆಯಬಳಿ ಇಪ್ಪತ್ತನಾಲ್ಕು ವರುಷದ ಮಗ ಶಾಮಣ್ಣನು ಕುಳಿತಿರುವನು. ಕಾಲಿನಬಳಿ ನಲವತ್ತು ವರುಷದ, ಚಿಂತೆಯಲ್ಲಿ ಬೆಂದು ಕೃಶಿದ, ಸುಬ್ಬಮ್ಮನು ಕುಳಿತಿರುವಳು. ಪಕ್ಕದಲ್ಲಿ ಹದಿನೆಂಟು ವರುಷದ ಮಗಳು ಪಾತಮ್ಮನು ಕುಳಿತಿರುವಳು. ಪಾತಮ್ಮನ ಮುಖದಲ್ಲಿ ಶಾಂತಿ, ಶಾಮಣ್ಣನ ಮುಖದಲ್ಲಿ ಕಳವಳ, ಸುಬ್ಬಮ್ಮನ ಮುಖದಲ್ಲಿ ದುಃಖ ಪಶ್ಚಾತ್ತಾಪಗಳು ಕಂಡುಬರುತ್ತಿರುವುವು.]

**ಶೀನ**—(ಕುಗ್ಗಿದ ಧ್ವನಿಯಲ್ಲಿ) ಶಾಮೂ! ಪಾತೂ! ಶಾಸ್ತ್ರಿಗಳು ಬಂದರೆ ?

**ಶಾಮು**—ಇಲ್ಲಪ್ಪ; ಬಸವಯ್ಯ ಕರಕೊಂಡು ಬರೋದಕ್ಕೆ ಹೋಗಿದಾನೆ.

**ಶೀನ**—ಆ ಮಹಾರಾಯಿತಿ ಲಿಂಗಮ್ಮನನ್ನೂ ಬರಹೇಳಬೇಕಾಗಿತ್ತು.

**ಪಾತು**—ಅವಳೂ ಬರ್ತಾಳಪ್ಪ, ನೀನು ಆಯಾಸ ಮಾಡಿಕೊಬೇಡ.

[ಬಸವಯ್ಯ, ಲಿಂಗಿ, ಶಾಸ್ತ್ರಿಗಳ ಪ್ರವೇಶ. ಶಾಸ್ತ್ರಿಗಳು ಮುಂದೆ ಬಂದು ಮಂಚದಬಳಿ ಕೂಡುವರು. ಆವರಿಬ್ಬರೂ ಕಾಲಬಳಿ ನಿಲ್ಲುವರು.]

**ಶೀನ**— ಬಂದಿರಾ ನನ್ನ ಬಂಧುಗಳೇ! ಬನ್ನಿ!

**ಶಾಸ್ತ್ರಿ**— ರಾಯರೇ! ಸಂಕಟ ಹೇಗಿದೆ ಈಗ?

**ಶೀನ**— (ಬಲವಂತದಿಂದ ಹಸನ್ಮುಖತೋರಲು ಯತ್ನಿಸುತ್ತಾ) ಶಾಸ್ತ್ರಿಗಳೇ! ನನಗೆ ಸಂಕಟವೇಕೆ? ಮುತ್ತಿನಂಥ ಮಗ, ಪ್ರಾಣದಂಥ ಹೆಂಡ್ತಿ, ಚಿನ್ನದಂಥ ಮಗಳು, ದೇವರಂಥ ಬಂಧುಗಳಿರೋವಾಗ . ಶಾಸ್ತ್ರಿಗಳೇ! ನಾನು ದೂರಾಲೋಚನೆ ಮಾಡದೆ ಯಾವುದೋ ಆಶೆ ಇಟ್ಟುಕೊಂಡು ಶಾಮಣ್ಣನಿಗೆ ಮದುವೆ ಮಾಡಿಬಿಟ್ಟು, ಅವನ ಕಾಲಿಗೆ ಸಂಕೋಲೆ ತೊಡಿಸಿದ ಹಾಗಾಯಿತು ನನ್ನ ಬೀಗನಿಗೆ 'ಹುಡುಗೀನ ಕಳಿಸಿಕೊಡು' ಅಂತ ಒರೆದರೆ, ಅವನು 'ನೀನು ಹೋದ ಮೇಲೆ, ನನ್ನ ಅಳಿಯನಿಗೆ ಸರಿಯಾದ ಒಂದು ಕೆಲಸಾಂತ ಆದಮೇಲೆ ನನ್ನ ಮಗಳನ್ನ ನಿನ್ನ ಮನೆಗ ಕಳುಹಿಸ್ತೀನೀ'ಂತ ಬರೆದ ಸ್ವಾಮೀ! ನಾನಿನ್ನು ಬದುಕಿರಬೇಕೇ!

**ಶಾಮು**— ಅಪ್ಪಾ! ಅದನ್ನೆಲ್ಲಾ ಈಗ ಮನಸ್ಸಿಗೆ ಹಚ್ಚಿಕೋಬೇಡಪ್ಪ ಇನ್ನೊಂದುಸಾರೀನೂ ಮೂರ್ಛೆ ಬರದಹಾಗೆ ನೋಡಿಕೋಬೇಕೂಂತ ಹೇಳಿದಾರೆ ಡಾಕ್ಟ್ರು.

**ಪಾತು**— ಅಪ್ಪಾ! ನೀನು ಆಯಾಸಪಟ್ಟುಕೋಬೇಡಪ್ಪಾ!

**ಲಿಂಗಿ**— ಸುದಾರಿಸಿಕೋಬೇಕು ಬುದ್ಧಿ!

**ಶೀನ**— ಆಹಾ! ಪ್ರಪಂಚದಲ್ಲಿ ವಿಶ್ವಹೃದಯದ ರೀತಿನೀತಿಯೇ ಬೇರೆ ಶಾಮೂ! ಪಾತೂ! ಲಿಂಗಮ್ಮ! ನಿಮ್ಮಗಳಾಶೆ ದೇವರಿಷ್ಟಕ್ಕೆ ವಿರುದ್ಧವಾಗಿದೆ ನನಗೆ ಮತ್ತೆ ಸಂಕಟ ಶುರುವಾಗ್ತಾ ಇದೆ ಬದುಕುವ ಆಶೆಯಿಲ್ಲ ನಾನು ಹೇಳಬೇಕೂಂತಿರೋದನ್ನೆಲ್ಲಾ ಹೇಳಿ ಮುಗಿಸಿಬಿಡುತ್ತೇನೆ ಶಾಮಣ್ಣಾ! ನನ್ನ ಹಿಂದಿನ ಸ್ಥಿತಿಯನ್ನು ಜ್ಞಾಪಿಸಿಕೋ, ಇಂದಿನ ಸ್ಥಿತಿಯನ್ನೂ ನೋಡು ನನಗೀ ದುರವಸ್ಥೆ ಯಾತಕ್ಕೆ ಬಂತೂ?- ಸಾಲದಿಂದ ಆಸ್ತಿ ಇದೇ ಅನ್ನೋ ಗರ್ವದಿಂದ ಮೊದಲು ಸಣ್ಣದಾಗಿ ಆರಂಭಿಸಿದ ಸಾಲ ಹತ್ತಾರು ವರುಷಗಳಲ್ಲೇ ಬೆಟ್ಟದ ಹಾಗೆ ಬೆಳೆದು, ಅಷ್ಟು ದೊಡ್ಡ ಆಸ್ತೀನೂ

ಗಾಳಿಗೆ ಊದಿ ತೂರಿಬಿಟ್ಟಿತು  ಶಾಮಣ್ಣಾ! ... ...ನಿನಗೆ ಕೈಯಾರ ನಾನೇ ಚಿಪ್ಪುಕೊಟ್ಟಂತಾಯಿತಲ್ಲಪ್ಪಾ! ಶಾಮೂ! ದೇವರೇ ಸಾಕ್ಷಾತ್ತಾಗಿ ಬಂದು 'ನನಗೆ ಒಂದು ಬಿಡಿಕಾಸನ್ನ ಕೊಡು ಮರುಕ್ಷಣವೇ ನಿನಗೆ ಹಣದ ಅಕ್ಷಯ ಪಾತ್ರೆಯನ್ನೇ ಕೊಡುತ್ತೇನೆಂದು' ಕೇಳಿದರೂ, ಆ ಬಿಡಿಕಾಸು ನಿನ್ನಲ್ಲಿಲ್ಲದಿದ್ದರೆ "ಇಲ್ಲ"ವೆಂದು ಧೈರ್ಯವಾಗಿ ಹೇಳಿಬಿಡಬೇಕೇ ಹೊರತು, ಆ ಬಿಡಿಕಾಸನ್ನೂ ಸಹ ಸಾಲ ಮಾಡಬೇಡ ಇದೇ ನಾನು ನನ್ನ ಅನುಭವದ ಕಾಳ್ಗಿಚ್ಚಿನಿಂದ ನಿನಗೆ ಉಳಿಸಿ ತಂದ ಅಮೂಲ್ಯ ರತ್ನ  ನನ್ನದು ಇನ್ನೊಂದು ಸಣ್ಣ ಕೋರಿಕೆ, ಕೊನೆಯ ಕೋರಿಕೆ, ಇದೆ ನಡೆಸುತೀನೀಂತ ಕೈಮೇಲೆ ಕೈ ಹಾಕಿದರೆ ಹೇಳುತೀನಿ

**ಶಂಕರ**— ಸ್ವಾಮೀ ತಮ್ಮಿಷ್ಟ ಎಷ್ಟು ಕಠಿಣವಾದದ್ದಾದರೂ ನಡೆಸದೆ ಹಿಂದೆಗೆಯೋ ಮಗ ಶಾಮಣ್ಣನಲ್ಲ  ಅದನ್ನ ನಿಸ್ಸಂಕೋಚವಾಗಿ ತಿಳಿಸಿ.

**ಶೀನ**— ಕೈ ಮೇಲೆ ಕೈ ಹಾಕಿದರೆ ಹೇಳಿಸ್ತೀನಿ.

**ಸುಬ್ಬ**—(ಗದ್ಗದ ಕಂಠದಲ್ಲಿ) ಶಾಮೂ! ಹೀಗೇಕೆ ಆಯಾಸ ಕೊಡುತೀಯಪ್ಪ?

**ಶಾಮು**—(ಕೈ ಮೇಲೆ ಕೈ ಹಾಕಿ) ಅಪ್ಪಾ! ನಿನ್ನ ಕೋರಿಕೆ ಎಷ್ಟು ಕಠಿಣವಾದದ್ದಾದರೂ ಶಿರಸಾವಹಿಸಿ ನಡೆಸುತೀನಿ. ಹೇಳಪ್ಪ.

**ಶೀನ**—(ಕೈ ಹಿಡಿದು ಬಲಗೈಯಿಂದ ತಲೆಯನ್ನು ನೇವರಿಸುತ್ತ) ನಾನೇ ಧನ್ಯ ಮಗೂ! ನೋಡು! ಬಸವಯ್ಯ ಹಳ್ಳಿಯಿಂದ ಎರಡು ಬಂಡಿ ಸೌದೆಯನ್ನ ತರಿಸಿಕೊಡುತಾನೆ. ನಾನು ಹೋದನಂತರ, ದೇಹಾನ ಹೇಗಾದರೂ ಸಾಗಿಸಿ ಆ ಸೌದೇಲಿ ಸುಡಿಸಿಬಿಡು.

[ಎಲ್ಲರೂ ದಿಗ್ಭ್ರಾಂತರಾಗುವರು.]

**ಶಂಕರ**— ಶಿವಶಿವಾ! ಸ್ವಾಮೀ! ಹೀಗೇಕೆ ಮಾತನಾಡುತೀರಿ!

**ಶಾಮು**— ಈಗ ಈ ಅಮಂಗಳದ ಮಾತೇಕಪ್ಪ?

**ಪಾತು**— ಅಪ್ಪಾ! ಇನ್ನೇನಾದರೂ ಮಾತನಾಡಬಾರದೇಪ್ಪ!

**ಲಿಂಗಿ**— ಬುದ್ಧೀ! (ಮಾತು ಹೊರಡದೆ ಕಂಬನಿ ತುಂಬುವಳು.)

**ಶೀನ**— ಇಲ್ಲ! ನನಗೆ ಸಂಕಟ ಹೆಚ್ತಾ ಇದೆ. ನಾನು ಬೇಗ ಹೇಳಿ

ಮುಗಿಸಿಬಿಡುತೀನಿ. ಶಾಮೂ! ನಾನು ಹೋದ ಮೇಲೆ ನನಗಾಗಿ ಶ್ರಾದ್ಧಾದಿ ಕರ್ಮಗಳನ್ನೆಂದಿಗೂ ನಡೆಸಬೇಡ. ಅದಕ್ಕಾಗಿ ನೀನು ಸಾಲದ ಹೆಸರನ್ನೂ ಸಹ ಎತ್ತಬೇಡ. ನೀನು ಸಾಲಗಾರನ ಮಗನಾಗಿ ದಿನಕ್ಕೆ ನೂರು ಬಾರಿ ಪಿಂಡ ಹಾಕೆದರೂ ನನಗೆ ರೌರವಾದಿ ನರಕ. ನೀನು ಸಾಲಗಾರರ ಮಗ ನಾಗದೆ ಇದ್ದು, ಪಿಂಡ ಹಾಕದೇಹೋದರೂ ನನಗೆ ಸ್ವರ್ಗ! ಹಾ! ಆಹ್ಹಾ! (ಸಂಕಟದಿಂದ ಹೊರಳುವನು)—ಸುಬ್ಬೂ! ನನಗಾಗಿ ಅಳಬೇಡ! ನಿನ್ನ ಪ್ರೇಮಕ್ಕೆ, ನಿಷ್ಕಲ್ಮಷ ಸೇವೆಗೆ, ದೇವರು ಮೆಚ್ಚಿದ್ದಾನೆ ರಾಮನಾಥ ಗೌಡನ ಕೈ ಹಿಡಿದಿದ್ದರೆ, ಸೀತೆಗಿಂತಲೂ. ಆಹ್ಹಾ! ಬೇಗ ನನ್ನ ಮಂಚಾನ ನಮ್ಮಪ್ಪನ ರೂಮಿಗೆ ಸಾಗಿಸಿಬಿಡಿ, ಅವನು ಪ್ರಾಣ ಬಿಟ್ಟ ಜಾಗದಲ್ಲೇ ನಾನೂ ಸಹ ..ಹಾ! (ದಿಗ್ಭ್ರಾಂತರಾಗಿ ಎಲ್ಲರೂ ನಿಂತಿರುವಲ್ಲಿ, ಶಾಸ್ತ್ರಿ, ಶಾಮಣ್ಣ ಮಂಚವನ್ನು ಒಳಕ್ಕೆ ಸಾಗಿಸುವರು ಮಿಕ್ಕವರು ಬಿಕ್ಕುತ್ತಾ ಹಿಂದೆ ಹೋಗುವರು. ಕ್ಷಣಕಾಲದಲ್ಲಿ ಒಳಗಡೆ 'ರಪಾ ರಪ್' ಎಂದು ಕೈಕಾಲು ಬಡಿದ ಶಬ್ದ ಹೆಂಗಸರ ಅಳು, ಶಾಮಣ್ಣನ, 'ಅಪ್ಪಾ! ಹೀಗೆಕೆ ಕಣ್ಣುಬಿಡುತೀಯಪ್ಪ' ಎಂಬ ಪ್ರಲಾಪ ಕೇಳಿಸುವುದು—ತಟ್ಟನೆ ಶಾಸ್ತ್ರಿ, ಬಸವಯ್ಯ ಇಬ್ಬರೂ ಹೊರಕ್ಕೆ ಬರುವರು ಮುಖದಲ್ಲಿ ಗಾಬರಿ)

**ಶಾಸ್ತ್ರಿ**—(ಸೊಂಟದಿಂದ ಒಂದು ರೂಪಾಯಿಬಿಲ್ಲೆಯನ್ನು ತೆಗೆದು ಕೊಟ್ಟು) ತಗೋ ಬಸವಯ್ಯಾ! ಬೇಗಹೋಗಿ ಡಾಕ್ಟರನ್ನು ಕರೆದುಕೊಂಡು ಬಾ—(ಬಸವಯ್ಯನು ಹೋಗಿ ಕೂಡಲೇ ಹಿಂದಿರುಗುವದು.)

**ಶಾಸ್ತ್ರಿ**—ಏನಯ್ಯ?

**ಬಸವ**—ಅವರೇ ಬತ್ತಾಅವರೆ ಬುದ್ಧೀ!

[ಡಾಕ್ಟರ ಪ್ರವೇಶ]

**ಡಾ**—ಏನು ಶಾಸ್ತ್ರಿಗಳೇ ಸಮಾಚಾರ?

**ಶಾಸ್ತ್ರಿ**—ಮತ್ತದೇ ಮಹಾಸ್ವಾಮೀ!

**ಬಸವ**—ಬ್ಯಾಗ ದಯಮಾಡಿ ಬುದ್ಧೀ!

**ಡಾ**—ಏನು ಪ್ರಯೋಜನವಿಲ್ಲ ಮುದುಕಯ್ಯ—

[ಮೂವರೂ ಒಳಕ್ಕೆ ಹೋಗುವರು ಎರಡು ನಿಮಿಷಗಳ ನಂತರ ಶಾಸ್ತ್ರಿ ಮತ್ತು ಡಾಕ್ಟರರು ಹೊರಕ್ಕೆ ಬರುವರು. ಅಳು ಹೆಚ್ಚುವುದು.]

**ಡಾ**— ಕೊನೇವರೆಗೂ ಮಾತನಾಡುತ್ತಿದ್ದರೋ ?

**ಶಾಸ್ತ್ರಿ**— ಹೌದು ಸ್ವಾಮೀ !

**ಡಾ**— ಒಳ್ಳೇ ಹಟವಾದಿ ಮನುಷ್ಯ; ಆತನಾಗೋಹೊತ್ತಿಗೆ ಇಷ್ಟುದಿನ ಹೊಡೆದಾಡಿದರು. ಇನ್ನು ಯೋಚನೆಮಾಡೇನ ಪ್ರಯೋಜನ ? ಮುಂದಿನ ಕೆಲಸ ನೋಡಿ—(ನಿಷ್ಕ್ರಮಣ)

[ಬಸವಯ್ಯನು ಕಣ್ಣೊರಸಿಕೊಂಡು ಹೊರಕ್ಕೆ ಬರುವನು ]

**ಶಂಕರ**— ಬಸವಯ್ಯಾ !

**ಬಸವ**— ಬುದ್ದೀ !

**ಶಂಕರ**— ಆ ಬಾಗಿಲು ಮುಂದಕ್ಕೆ ಎಳೆದುಕೊ

[ಬಸವಯ್ಯನು ಬಾಗಿಲು ಮುಚ್ಚುವನು. ಅಳುವಿನ ಧ್ವನಿ ಕೇಳಿಸದೇ ಹೋಗುವುದು]

**ಶಂಕರ**— ಬಸವಯ್ಯಾ! ಪ್ರಾಣಪಕ್ಷಿ ಹಾರಿಹೋಯಿತು

**ಬಸವ**— ಓಯ್ತು ಬುದ್ದೀ! ನನ್ನೆಂಡರ ಕಡಗದ ಖುಣಾನೇ ಕಡೇದಾಯ್ತು

**ಶಾಸ್ತ್ರಿ**— ನೀನೂ ನಿನ್ನ ಹೆಂಡತಿ ನಿಮ್ಮ ಸರ್ವಸ್ವಾನೂ ತೇದುಬಿಟ್ಟಿ

**ಬಸವ**— ನಾವೇನುಬುದ್ದೀ ದೊಡ್ಡಯ್ಯನೋರ ಜೋಡುಗಳು

**ಶಂಕರ**— ಅಹಾ! ದೊಡ್ಡಜೀವಪ್ಪ ನಿನ್ನದು. ಅದುಸರಿ ಈಗ ಮುಂದಕ್ಕೆ ಹ್ಯಾಗೇರ್ಪಾಡುಮಾಡೋದು ?

**ಬಸವ**— ನೀವೆಂಗೇಳಿದರೆ ಅಂಗೆ ಮಾಡಾಕೆ ನಮ್ಮ ದೇವರಾಣೆ ಬುದ್ದೀ !

**ಶಂಕರ**— (ಅನುಮಾನಿಸಿ) ಮನೇಲೇನೂ ಸ್ವಾರಸ್ಯವಿಲ್ಲಾ ಅಲ್ಲವೇ ?

**ಬಸವ**— ಈ ಮನೇಲಾಗಲೀ, ನನ್ನ ಮನೇಲಾಗಲೀ ಒಂದು ಕಾಸು ಕೂಡ ಇಲ್ಲ ಬುದ್ದೀ ತಮ್ಮ ತಾವ ವಂಚನೇ ಮಾತೇಳಿದರೆ ನನ್ನ ನಾಲಿಗೆ ......

**ಶಂಕರ**— ಹಾಂ, ತಡೀ ತಡೀ ! ಅಂಥಾ ಮಾತಾಡಬೇಡ ... ನೀನು ಧರ್ಮಾತ್ಮಾಪ್ಪಾ! ಈಗ ನೋಡು-(ಜನಿವಾರದಿಂದ ಉಂಗುರ ಕಳಚಿಕೊಟ್ಟು) ಈ ಉಂಗುರ ತಗೊಂಡು ಹೋಗಿ ಸರಾಫಕಟ್ಟೆಯಲ್ಲಿ ಮಾರಿಬಿಡು. ಗಳು, ಹಗ್ಗ, ಬೊಂಬು, ಮಡಿಕೆ, ಬಟ್ಟೆ ಇವುಗಳ ಪಟ್ಟಿ ಕೊಡುತೀನಿ ಆ ಸಾಮಾನು ಗಳನ್ನು ಆ ಹಣದಿಂದ ಇಲ್ಲಿಗೆ ತಂದು ಕೊಟ್ಟು ಬಿಟ್ಟು, ಹಳ್ಳಿಗೆ ಹೋಗಿ ಸೌದೇ, ಹೇರಿಸಿಕೊಂಡು, ದಾರೀಲಿ ಕೋರಿಯಿಂದ ಎರಡು ಗಂಧದತುಂಡು ತಗೊಂಡು, ಅಲ್ಲಿ-ಗೇ-ಬಂದುಬಿಡು.

**ಬಸವ**— ಬುದ್ದೀ ! ಕೆರೆ ನೀರ ಕೆರೆಗೆ ಚೆಲ್ಲಿದಂಗೆ ಮಾಡಿವ ನನ್ನೇ ಧರ್ಮಾತ್ಮಾಂದರಲ್ಲ, ಅತ್ತು ಮನೆ ತಿರುಗಿದ ದುಡ್ಡನ ಇಂಗೆ ಚೆಲ್ಲುತಿದೀರಲ್ಲ! ತಾವು ದ್ಯಾವರೆ ಅಲ್ಲವೇ ನಮ್ಮಪ್ಪ !

[ದೀರ್ಘದಂಡಪ್ರಮಾಣ ಮಾಡುವನು. ಶಾಸ್ತ್ರಿ ಕಣ್ಮುಚ್ಚಿ ನಿಂತಿರುವನು. ಕಣ್ಣುಗಳಲ್ಲಿ ನೀರು ಹರಿಯುತ್ತಿರುವುದು.]

---

## ಮೂರನೇ ಪ್ರವೇಶ

[ಅಶ್ವತ್ಥ ಕಟ್ಟೆಯ ಬಳಿ ನಂಜಯ್ಯನೊಬ್ಬನೇ ಇರುವನು. ಸಂಜೆ.]

**ನಂಜ**— ಎಂತಾ ಕೆಲಸ ಆಯಿತು ! ನಮ್ಮ ರಾಯರು ಇನ್ನಾ ಅತ್ತೊ ರಸ ಚೆಂದಾಗಿ ಬದುಕಿದ್ದು, ಈ ಅನ್ಯಾಯದ ಬೊಡ್ಡೀಮಗ ಪಿರೀಮಿಯಾ ಕಟ್ಟೀ ಕಟ್ಟೀ ಸಾಯೋಅಂಗೆ ಮಾಡಬೇಕಾಗಿತ್ತು. "ಬಡವಾ ಬುದ್ದೀ ! ಬದೀಕೊತೀನಿ ನಿಮ್ಮೆಸರೇಳಿಕೊಂಡು, ಈ ಪತ್ರಾ ನನ್ನೆಸರಿಗೆ ಮಾಡಿಕೊಟ್ರಿ' ಅಂದ್ರೆ, ತಕ್ಷಣಾನೇ ವೇಸಾಕಡ್ಡಿ ತರಿಸಿ, "ತಗೋ ನಂಜಯ್ಯ ನೀವೆಲ್ಲಾ ಈ ಮನೆ ಬೆಳಕುಗಳದ್ದಂಗೆ ನಾನೆಷ್ಟು ಬ್ಯಾಗ ಸತ್ತರೆ ನಿನಗೆ ಅಷ್ಟು ಒಳ್ಳೇದು" ಅಂತ ಏಳಿ ಬರಕೊಟ್ಟು ಬಿಟ್ಟರೇ ! ಅಂತ ಮಾರಾಯರು ಸತ್ತು ಸಾಪಿಗೇ ಮರ ಆದ್ರು. ಅದನ್ನುಳಸಾಕೆ ಮನ್ಯಾಗಿದ್ದಬದ್ದ ದವಸಾನೆಲ್ಲಾ ಮಾರಿ, ಕಡೇಗೆ ಎಂಡರ ಕೊಳ್ಳಾಗಿನ ಮಂಗಳಸೂತ್ರ ಕೂಡ ಮಾರಿ, ಕಡೇ ತಿಂಗಳ ಪಿರೀಮಿಯಂ ಕಟ್ಟಿದೇನೆ! ನನ್ನಂತ ಪಾಪಿ ಇನ್ನಾರು! ಕೊನೇಗದೂ

ದಕ್ಕಲಿಲ್ಲ; ದುಡ್ಡು, "ಇವತ್ತು ಬರುತ್ತೈತೇ, ನಾಳೆ ಬರುತ್ತೈತೆ, ಕೊಟ್ಟುಬಿಡು ತೀನಿ"ಂತ ಘೋಂಗಿ ಒಡೀತಾ ಆನ್ನೆ. ಇಷ್ಟೊತ್ತು ಮನೇತಾವ ಕಾದು ಬೇಜಾರಾಯಿತು. ಎಂಗಿದ್ದರೂ ದಿನಾ ಸಂಜೆವೊತ್ತು ಆ ಪಾತವ್ವ ದೇವಸ್ಥಾನಕೆ ಬರೋಒತ್ತಿಗೆ ಆವಯ್ಯನು ಇಲ್ಲಿ ಬಂದು ಕಾದಿರುತಾನೆ ಈವೊತ್ತೂ ಬರುಬೌದು. ಇನ್ನು ಕೈಗೆ ಸಿಕ್ಕಿದರೆ ಬಿಡಾಕಿಲ್ಲ, ದುಡ್ಡು ಕಕ್ಕಿಸಿಬುಟ್ಟೇ ಎಳ್ಡನೇ ಮಾತು. (ಸದ್ದು) ಓಹೋ! ಬಂದ ಕೈಯೆಣ್ಣೆಮುಕ.

**ಬಸವ**—(ಪ್ರವೇಶ) ನಮ್ಮಪ್ಪಾ! ದೇವರೇ!

[ದೇವಾಲಯದಕಡೆ ಕೈ ಮುಗಿಯುವನು.]

ಏನು ನಂಜಯ್ಯಾ! ಇಲ್ಲಿ ನಿಂತುಬಿಟ್ಟದ್ದೀ?

**ನಂಜ**—ಇಂಗೇ ನಿನ್ನಂತ ದ್ಯಾವರಭಕ್ತರ ದರ್ಶನ ಮಾಡಾಕೆ

**ಬಸವ**—ನಂಜಣ್ಣಾ! ನೋಡು ಐನೋರು ಸತ್ತು ಎಂಟುದಿನವಾದೋ. ಅವರಿರೋವರಿಗೂನೂ ಎಲ್ಲಿಂದಾನೋ ಮನ್ಯಾಗೆ ನಾಲ್ಕಾಳು ರಾಗಿ ಇರುತಿದ್ದೋ ಆದರೆ ಈಗೆಂಟುದಿನದಿಂದ ಬೋ ಕಷ್ಟವಾಗ್ಯೆತೆ. ನೆನ್ನಿಂದ ಮನೇಲಿ ಉಪವಾಸ ನೀನೊಸಿ ದೊಡ್ಡ ಮನಸ್ಸು ಮಾಡಿ ಆ ಇಂದಿನ ಬಾ ಕಿಕೊಟ್ಟರೆ ನಾನು ನಿಂಗೀ ಬದುಕೋತೀವಪ್ಪ ನಿನ್ನೆಸರೇಳಿಕೊಂಡು

**ನಂಜ**—ಅದೇನಾ? ಕಂಡಾಗೆಲ್ಲಾ "ಇಂದಿನ ಬಾಕಿ, ಇಂದಿನ ಬಾಕಿ" ಅಂತೀಯಲ್ಲಾ! ವಾದೊರಸ ಐನೋರುಮುಂದ ಕೊಟ್ಟ ಮೂಗಳ ರಾಗಿ ತಾನೇ? ಅದನ್ನ ನಿನ್ನಿಂದ ಕೊಡಿಸೋವಾಗ ರಾಯರು, "ಇದು ಸಾಲಾಂತ ತಿಳೀಬ್ಯಾಡ ನಂಜಯ್ಯ! ಸಿಂದೂಂತ ತಿನ್ನೂ"ಂತ ಏಳಿರಲಿಲ್ಲವ?

**ಬಸವ**—ಔದು ನಂಜಣ್ಣಾ

**ನಂಜ**—ಸರೀ ಮತ್ತೀಗಾ—

**ಬಸವ**—ನೀನು ಮನಸ್ಸಿಗೆ ಯತೆ ಪಟ್ಟಕೊಂಡೀಯಲ್ಲಾ ಸಾಲಾಂದ್ರೇಂತ ಅಂಗೇಳಿದರು. ಆದರೆ ಕೊಟ್ಟೋನು ನಾನಲ್ವ! ನಿನ್ನ ಸಮೇವಕ್ಕೆ ನಾನು ಕೊಟ್ಟರೆ ನನ್ನ ಸಮೇವಕ್ಕೆ ನೀನು ಕೊಡಬೇಡವಾ?

**ನಂಜ**—ನೋಡು, ಈ ಅಳೇಬಾಕಿ ಮಾತು ಬಿಟ್ಟುಬಿಟ್ಟು ಇನ್ನೇನಾದರೂ ಇದ್ದರೆ ಏಳು.

**ಬಸವ**— ಇದ್ಯಾಕೆ ನಂಜಣ್ಣ ನೀನು ಇಂಗೆ ಇಸದಮನಸ ಆಗಿದ್ದೀ. ಈ ಬುದ್ದಿ ತರವಲ್ಲಾ. ಓದ್ದೋರು ಬರೆದೋರು ಸುಳ್ಳೇಳಿ ಇಸಾ ಮಡಿಗಿದರೆ ಅದೊಂತರಾ ಚೆಂದಾ. ನಮ್ಮಂತಾವರು ಅಂಗೆ ಮಾಡಬಾರದು. ಸಾಚಾರೀತಿ ನಡೀಬೇಕು ನೀನು ಕೊಡದಿದ್ರೆ ಕೆಡತು, ಕೊಡಾಕಿಲ್ಲಾಂತ ಏಳು ಈ ದಬಾವಣೆಮಾತು ಯಾಕಾಡೀಯಾ ?

**ನಂಜ**— ಏ ಬಸವಯ್ಯಾ! ನನಗೆ ನಿನ್ನಂತೋರ ಬುದ್ದಿವಾದ ಬ್ಯಾಡ. ಎಲ್ಲೂ ಸಿಕ್ಕಲಿಲ್ಲವೇನೋ ಒಟ್ಟೀಗಿಟ್ಟು, ಉಡೀಕೊಂಡು ಬಂದ ಅಳೀಬಾಕೀಯಾ ! ವಾರೀಮೇರೆ ಸೇರು ! (ಭುಜವನ್ನು ಹಾರಿಸಿ ಅತ್ತ ತಿರಗುವನು)

**ಬಸವ**— ಕೊಡೋ ದೇವರು ಎಂಗಾನ ಕೊಡುತಾನೆಬಿಡು ನಂಜಣ್ಣ. ಕೊಡದೇ ಓದರೂ ಅವನೆಸರಿನಮೇಗೆ ಸತ್ತರಾಯಿತು. ಆದರೂ ನೀನಿಂಗಾದ್ದು ನಂಗೇನೋ ಸಂಕಟ. ನಮ್ಮ ಜಾತೀಗೇ ಒಂಟಾಕಿಲ್ಲ ಈ ನಡತೆ

**ನಂಜ**— ಏ! ನಿಲ್ಲಿಸು ನಿನ್ನರಟೀಯಾ—ಇಲ್ಲದಿದ್ದರೆ ನೋಡು .. ಅಗೋ ರಾಯರು ಬಂದ್ರು

[ರಂಗನಾಥರಾಯರ ಪ್ರವೇಶ. ಮುಖಮುದ್ರೆಯಲ್ಲಿ ವಿಜಯಾನಂದ]

**ಬಸವ**— ಅಡ್ಡಬಿದ್ದೇ ಬುದ್ದೀ !

**ನಂಜ**— ನಮಸ್ಕಾರ ಬುದ್ದೀ !

**ರಂಗ**— ಏನ್ರಯ್ಯಾ ನೀವಿಬ್ಬರೂ ಇಲ್ಲಿ ನಿಂತುಕೊಂಡು ಚರ್ಚೆ ನಡೆಸುತಾ ಇದೀರಿ ?

**ನಂಜ**— ಏನು ಇಲ್ಲಾ ಬುದ್ದಿ; ಬಸವಯ್ಯಾ, ಅವನೆಂಡರು ಎಳ್ಡುದಿವಸದಿಂದ ಉಪಾಸಾನಂತೆ ಅದಕ್ಕೆ ಅವನು ನನ್ನ ರಾಗಿ ಕೇಳೀತಾ ಇದ್ದ. ನಾನು ಇಲ್ಲಾಂತಿದ್ದೆ.

**ರಂಗ**— ನಿಜ ! ನೋಡು ಬಸವಯ್ಯಾ ! ನಿನಗೀಗ ಒಂದು ಕಾಳು ರಾಗಿ ಸಾಲ ಕೊಡಬೇಕಾದ್ರೂ ಯಾವ ಆಧಾರದ ಮೇಲೆ ಕೊಟ್ಟಾರು ? ಮನೆಯಿಲ್ಲಾ, ಮರವಿಲ್ಲಾ, ಮನೇಲಿದ್ದ ಬಡ್ಡದ್ದನ್ನಲ್ಲಾ ಆಸಾಯೋನ ಬಾಯಿಗೆ ಹಾಕಿಬಿಟ್ಟೆ.

**ಬಸವ**— (ಸಂಕಟದಿಂದ ಕಿವಿಗಳನ್ನು ಮುಚ್ಚಿಕೊಂಡು) ಶಿವಶಿವ! ಬುದ್ಧಿ! ರಾಯರಿಚಾರದಾಗೆ ನನ್ನಕೂಡ ಇಂತಾ ಮಾತಾಡಬೇಡಿ ದೇವರೇ! ನಿಮ್ಮ ಕಾಲಿಗೆ ಬಿದ್ದು ಬೇಡ್ಕೋತೀನಿ ಸತ್ತು ಸಂಪಿಗೇಪುರ ಆಗವ್ರೆ ಆ ನಮ್ಮಪ್ಪ ಅವರಮೇಗೆ ಇಂತಾಮಾತೇ ?

**ರಂಗ**— ಅಲ್ಲವೋ ಬಸವ! (ಕೃತ್ರಿಮಕೋಪ) ನಿನ್ನ ಸಂಸಾರ ಸುದಾರಿಸಿಕೊಳ್ಳೋ ಯೋಗ್ಯತೇನೇ ನಿನಗಿಲ್ಲ! ಇಂಥಾದ್ದರಲ್ಲಿ ಅವರಿವರಮನೆ ಉದ್ಧಾರ ಮಾಡೋದು ಯಾತರ ಧರ್ಮಾನೋ ?

**ಬಸವ:**— ನನ್ನ ಮಾತು ಬಿಡೀ ಬುದ್ಧಿ (ಕುಪಿತನಾಗಿ) ನನ್ನ ಸಂಸಾರದ ಸುದಾರಣೆಗೆ ದೇವರಪನೆ, ತಮ್ಮ ತಾವ ಬಿಕ್ಸಕ್ಕೆ ಬಂದಿಲ್ಲ ಈಗ

**ರಂಗ**— (ಸಮಾಧಾನಪಡಿಸುತ್ತಾ) ಕೋಪಿಸಿಕೋ ಬೇಡ ಬಸವಯ್ಯ! ನೀನು ಮೊದಲು ಹಣವಂತನಾದರೆ ನಾಲ್ಕುಜನಕ್ಕೆ ಉ ಪ ಕಾ ರ ಮಾಡಬಹುದು ನೀನೇ ಪುರಂದರದಾಸನಾಗಿದ್ದರೆ, ಇನ್ನು ಲೋಕೋಪಕಾರ ಮಾಡೋದೇನು ? ಅದು ಹೋಗಲಿ ಈಗ ನಿನ್ನ ಸಮಯಕ್ಕೆ ನಾನು ಆಗುತೀನಿ. ನಿನಗೀಗ ಎಷ್ಟು ಸಂಬಳ ಸ್ಕೂಲಿನಲ್ಲಿ ?

**ಬಸವ**— ಎಂಟು ರೂಪಾಯಿ

**ರಂಗ**— ಈಗ ನಿನಗೆ ಹತ್ತುರೂಪಾಯಿ ಸಾಲ ಅರ್ಜುನಶೆಟ್ಟಿ ಹತ್ತಿರ ಕೊ ಡಿ ಸು ತೀ ನಿ. ಸುಲಭದರ ಬಡ್ಡೀಮೇಲೆ; ಅದಕ್ಕೆ ನೀನು ಏನು ಮಾಡಬೇಕೂಂತೀ; ಒಂದೈನೂರು ರುಪಾಯಿ ಪಾಲಿಸಿ ತಗೋ ಇನ್ಷೂರೆನ್ಸದು ನೀನು ಹಣವಂತನಾಗಲಿ, ನೀನು ಮುಂದಕ್ಕೆ ಬರಲಿ, ಅನ್ನೋ ಆಶೆಯಿಂದ ಇದೆಲ್ಲಾ ಹೇಳೋದು ಹೋಲ್‌ಲೈಫ್ ಪಾಲಿಸೀ ಅಂತ ಸುಲಭದ ರ ದ ಪ್ರೀ ಮಿ ಯಂ ಒಂದೈನೂರು ರೂಪಾಯಿ ಪಾಲಿಸಿ ತಗೋ. ನಿನಗೆ ವಯಸ್ಸಾಯಿತು ಯಾವ ಕಂಪನೀಲೂ ನಿನ್ನ ಕೇಸು ಹಿಡಿಯಲ್ಲ ವಯಸ್ಸು ಜಾಸ್ತಿಯಾಯ್ತು ಅಂತಾರೆ. ಆದರೆ ನಾನು ನಮ್ಮ ಡಾಕ್ಟರಿಗೆ ಹೇಳಿ ನಿನ್ನ ಕೇಸು ಹಿಡಿಯೋಹಾಗೆ ಮಾಡುತೇನೆ. ಮಧ್ಯೆ ನಿನಗೆ ಪ್ರೀಮಿಯಂ ಕಟ್ಟೋದಕ್ಕೆ ಆಗದಿದ್ದರೆ ನನಗೆ ಹೇಳು: ನಾನು ನಿನಗೆ ಸಹಾಯ ಮಾಡುತ್ತೇನೆ.

[ನಂಜನು ಕೆಮ್ಮುವನು. ರಾಯನು ಅವನನ್ನು ದುರುಗುಟ್ಟಿಕೊಂಡು ನೋಡುವನು]

**ಬಸವ—** ತಮಗೆಲ್ಲಾ ಯಾಕುಬುದ್ಧೀನನ್ನಿಂದ ಈಸೊಂದು ತೊಂದರೆ! ನಮ್ಮಪ್ಪದೇವರು ಎಂಗೆ ನಡೆಸುತಾನೋ ಅಂಗೆ ನಡೆದರಾಯಿತು ಬತ್ತೀನೀ ಬುದ್ದೀ—

[ನಿಷ್ಕ್ರಮಣ]

**ರಂಗ—**(ಕಿಡಿಯಾಗಿ) ನಂಜಾ!!

**ನಂಜ—** ಬುದ್ದೀ ?

**ರಂಗ—** ಇದ್ಯಾಕೋ ನೀನು ಹೀಗೆ ನನ್ನ ಭಾಗಕ್ಕೆ ಶನಿ ವಕ್ರಿಸಿದ ಹಾಗೆ ವಕ್ರಿಸಿದೀ ?

**ನಂಜ—** ಯಾಕೆ ಬುದ್ದೀ ?

**ರಂಗ—** ಇಲ್ಲಿಗೆ ಯಾಕೆ ಬಂದೆ ನೀನು ?

**ನಂಜ—** ತಾವಿಲ್ಲಿಗೆ ಬಂದೇ ಬತ್ತೀರೀಂತ ಗೊತ್ತು ಅದಕ್ಕೆ

**ರಂಗ—** ಅದು ಹ್ಯಾಗೆ ಗೊತ್ತು ?

**ನಂಜ—** ದಿನಾ ಸಂಜೆವೊತ್ತು ವಾತವ್ವಾ ಅವರು

**ರಂಗ—** ಸಾಕು ಬಾಯಿ ಮುಚ್ಚು . (ಸಮಾಧಾನಕ್ಕೆ ಬರುತ್ತಾ) ನಾನು ಮಾತನಾಡುತ್ತಿದ್ದಾಗ ನೀನು ಕೆಮ್ಮಿದ್ದು ಯಾಕೆ ?

**ನಂಜ—** ತಮ್ಮ ದರ್ಮಾತನ ನೋಡಿ ಗಂಟಲು ಒಣೀಕೊಂಡು ಬಂತು ಬುದ್ದೀ ಅದಕ್ಕೆ ಅಲ್ಲಾ, ನನಗೆ ಪಿರೀಮಿಯಂ ಕಟ್ಟಿ ಕಟ್ಟಿ ಸಾವಿರ ರೂಪಾಯಿ ಗಂಟಿಗೇ ತಂದ್ರಲ್ಲ ಚಕ್ರಾವಾ ? ಅಂಗೇತಾನೇ ಬಸವಯ್ಯನಿಗೂ ಸಾಯಾ ಮಾಡೋದು ?

**ರಂಗ—** ನಿನ್ನ ಗಂಟಿಗೇನೋ ಚಕ್ರ ? ಹಣ ಬಂದು ಎರಡುದಿವಸ ವಾಯಿತು. ನಿನ್ನ ಕೈಲಿ ಕೊಟ್ಟರೆ ಹಾಳುಮಾಡಿಕೊಳ್ಳುತೀಯಲ್ಲಾಂತ ನಾನೇ ಇಟ್ಟುಕೊಂಡಿದೀನಿ

**ನಂಜ—**(ಅರಳಿ) ಔದು ಬುದ್ದೀ ? ಅಂಗಾರೆ ನನ್ನಣ ಕೊಟ್ಟುಬುಡಿ ಬುದ್ದೀ !

**ರಂಗ**— ಬೇಡಾ ಕಣೋ—ನನ್ನ ಹತ್ತಿರಿದ್ದರೆ ನಿನ್ನ ಹಣ ಸುರಕ್ಷಿತವಾಗಿರುತ್ತೆ

**ನಂಜ**— ಬೇಡಾ ಬುದ್ಧೀ ನಿಂಪಾದ, ಈ ಗಂಟಿನ ಸುದ್ದಿ ನಿಮ್ಮ ಕಣ್ಣಾಣೆಗೂ ನಾನು ಯಾರತಾವಾನೂ ಎತ್ತಾಕಿಲ್ಲ ನನ್ನಣ ನಂಗೆ ಕೊಟ್ಟುಬಿಡಿ ಬುದ್ಧಿ!

**ರಂಗ**— ಬೇಡವೊ, ನನ್ನ ಹತ್ತಿರವೇ ಇರಲೋ; ಈಗ ನೋಡು! ಬಸವಯ್ಯನಿಗೆ ಬಂದಿದೆಯಲ್ಲ ಅಂಥಾ ಸ್ಥಿತಿ ನಿನಗೂ ಬಂದಾಗ ತೆಗೆದು ಕೊಟ್ಟರಾಯಿತು

**ನಂಜ**—(ಕ್ರೋಧ ನನ್ನ ನುಂಗುತ್ತಾ) ಬ್ಯಾಡಾ ಬುದ್ಧೀ ನಿಮ್ಮ ದಮ್ಮಯ್ಯ! ಜಮೀನು ಹರಾಜಿಗೆ ಬಂದೈತೆ ಎಂಡರ ಕೊಳ್ಳಾಗೆ ಮಾಂಗಳ ಸೂತ್ರ ಕೂಡ ಇಲ್ಲ

**ರಂಗ**—(ನಿಧಾನಿಸಿ) ನೋಡು—ನೀನು ನನಗೆ ಮುಂದೆ ಯಾವಾಗಲೂ ಸಹಾಯ ಮಾಡುತಾ ಬರುತೀನಿ ಅಂತ ದೇವರಮೇಲೆ ಆಣೆ ಇಟ್ಟು ಹೇಳಿಬಿಡು; ನಿನ್ನ ಹಣ ನಿಂಗೆ ಕೊಟ್ಟುಬಿಡುತೀನಿ

**ನಂಜ**—(ನಿಧಾನಿಸಿ) ಯಾವ ದೇವರಮೇಗೆ ಬುದ್ಧೀ?

**ರಂಗ**—(ಸುತ್ತಲೂ ನೋಡಿ) ಯಾವದೇವರೇನು!... ಈ ವಿಶ್ವೇಶ್ವರನ ಮೇಲೆ

**ನಂಜ**—(ಬಿಡುಗಡೆ ಹೊಂದಿದವನಂತೆ) ಆಂ! –ಈ ಇಸ್ವೇಸ್ವರನಾಣೆಗೂ ನನ್ನ ಜೀವ ಇರೋಕಂಟ ನಿಮಗೆ ಸಾಯಾ ಮಾಡ್ತಾಬತ್ತೀನಿ ನನ್ನೊಡಯಾ; ನನ್ನಣ ನಂಗೆ ಕೊಟ್ಟುಬಿಡಿ.

**ರಂಗ**—(ತನ್ನ ಕೈಚೀಲದಿಂದ ನೋಟಿನ ಕಂತೆಯನ್ನು ತೆಗೆದು) ತಗೋ; ಎಣಿಸಿಕೋ ನೂರು ರೂಪಾಯನ್ನ.

**ನಂಜ**— ನೂರೇ ರುಪಾಯ? (ಎಣಿಸಿಕೊಳ್ಳುತ್ತಿರುವನು)

**ರಂಗ**— ಹೌದು ಕಣೋ; ನೀನು ನನಗೆ ಮಾಡೋ ಸಹಾಯಕ್ಕೆ ನಾನು ನಿನಗೆ ಇಪ್ಪತ್ತೈದು ರೂಪಾಯಿ ಕೊಡೋದು ಹೆಚ್ಚು. ಹೋಗಿ ಒಂದು ದೊಡ್ಡ ಮಾಂಗಲ್ಯ ಮಾಡಿಸಿ ನಿನ್ನ ಹೆಂಡತಿ ಕೊರಳಿಗೆ ಹಾಕಿಬಿಡು.

ನೋಡು ! ನಂಜ ! ನಾಳೆ ಸಂಜೆ ಮನೆ ಹತ್ತಿರ ಬಾ. ಇನ್ನೊಂದು ಕೆಲಸ ಹೇಳುತೀನ್ನಿ, ಅದನ್ನು ನೀನು ಸರಿಮಾಡಿ ಕೊಟ್ಟರೆ ನಿನಗೆ ಇನ್ನೂರು ರೂಪಾಯಿ ಬಹುಮಾನ ತಿಳಿಯಿತೇ ?

**ನಂಜ**— (ಹೊರಡುತ್ತಾ) ತಿಳೀತು ಬುದ್ದೀ !

**ರಂಗ**— ನಂಜಾ !

**ನಂಜ**— ಬುದ್ದೀ !

**ರಂಗ**— ಇನ್ನು ಮೇಲೆ ಸಂಜೆಹೊತ್ತು ಇಲ್ಲಿ ಬಂದು ಕಾಯಬೇಡ ತಿಳಿಯಿತೆ ?

**ನಂಜ**— ಉಂಟೇ ಬುದ್ದಿ ! ತಮ್ಮ ಸುಖಕ್ಕೆ ನಾನ್ಯಾಕೆ ಅಡ್ಡ ಬರಲ್ರಿ, (ಹೊರಡಲಿರುವನು)

**ರಂಗ**— (ಸಿಟ್ಟನ್ನು ನುಂಗುತ್ತ,) ನಂಜಾ !

**ನಂಜ**— (ಹಿಂದಿರುಗಿ) ಬುದ್ದೀ !

**ರಂಗ**— ಏನು ಶಾಮಣ್ಣನ ಸಮಾಚಾರ ?

**ನಂಜ**— ಶಾಮಣ್ಣೋರ ಸಮಾಚಾರ ಇನ್ನೇನ್ನು ಬುದ್ದಿ ! ಅವರಪ್ಪ ನಾಯೋವಾಗ 'ನನ್ನತಿತಿ ಮಾಡಬೇಡಾ"ಂತ ಆಣೆ ಮಡಗಿಸಿಕೊಂಡಿದ್ದರಂತೆ ಅವರು ಅಪ್ಪನ್ನ ಅಂಗೇ ಸುಟ್ಟು ಬಿಟ್ಟು ಬಂದು ಕುಂತವ್ರೆ. ಅದಕೆ ಶಾಮ ಣ್ಣೋರು ಬೀದ್ಯಾಗೆ ಬಂದರೆ ಊರೋರೆಲ್ಲಾ ಅವರಕಡೇನೆ ಬೆಳ್ಳು ತೋರಿಸಿ "ಸತ್ತಮೇಗೆ ತಿತೀ ಮಾಡದೆ ಇರೋದ–ಇದೆಂತಾ ದರ್ಮ" ಅಂತ ನಗಾಡ್ತಾ ರಂತೆ ದಿನಾ ರಾತ್ರಿ ಆ ಸುಬ್ಬಮ್ನೋರ ಕನಸನಾಗೆ ರಾಯರು ಕಪ್ಪನೆ ನೆಳ್ಳಾಗಿ ಬಂದು ನಿಂತುಕೊಂಡು, 'ನಂಗೆ ಅಸಿವೂ ! ನಂಗೆ ಬಾಯಾರಿಕೆ' ಅಂತ ಅಳತಾ ಕೈಚಾಚಿ, ಅಂಗೆ ಮಾಯವಾಗಿ ಬಿಡತಾರಂತೆ ಅದಕ್ಕೆಆಯಮ್ಮ, 'ಅಯ್ಯೋ! ರಾಯರಿಗೆ ತಿತೀ ಮಾಡಲಿಲ್ಲಿವೇ ! ರಾಯರು ಪಿರೇತ ಆಗವ್ರೇ' ಅಂತ ಬೆಳ ಗಿಂದ ಸಾಂಜೆಕಂಟ ಅಳುತಾರಂತೆ ಈ ಮದ್ಯೆ ಶಾಮಣ್ಣೋರಿಗೆ ಇತ್ತಕಡೆ ಬಾವಿ, ಅತ್ತಕಡೆ ಕೆರೆ

**ರಂಗ**— (ಕಣ್ಣು ಮಿಂಚುವುದು) ಓಹೋ ! ಪ್ರೇತವಾಗಿದಾನಂತೋ ಅವನೂ ? .. ... ಊಹೂಂ. ನಿಜ ನಿಜ! ನೋಡು ನಂಜ! ನಿನಗೆ ಶಾಮಣ್ಣ

ಸಿಕ್ಕಿದರೆ ಅವನಿಗೆ ಈ ಸಮಾಚಾರ ಹೇಳೋದಲ್ಲದೆ, ಊರೋರೆಲ್ಲಾ ಸೇರಿ ಕೊಂಡು ನಿನಗೆ ಬಹಿಷ್ಕಾರ ಹಾಕಿಸಬೇಕೂಂತ ತರದೂದು ನಡೆಸುತಾ ಇದಾರೇಂತ ಹೇಳು.

**ನಂಜ**— ಆಮೇಕೆ ?

**ರಂಗ**— ತಿಥೀಗೆ ಅವನ ಹತ್ತಿರ ಒಂದು ಬಿಡಕಾಸೂ ಇಲ್ಲ.

**ನಂಜ**— ಅದ್ಕೆ–?

**ರಂಗ**— ಆಗೇನೋ! ಹೋಗೋದು. ಸರಿನಮ್ಮ ಕೈಲಾದ ಸಹಾಯ— ನಮ್ಮ, ಅರ್ಜುನಸೆಟ್ಟಿಹತ್ತಿರ ಒಂದೈವತ್ತುರೂಪಾಯಿ ಸಾಲ ಕೊಡಿಸೋದು ಆ ಮೇಲೆ ಮುಂದೆಲ್ಲಾ ಸರಾಗವಾಗಿ ನೆರವೇರುತ್ತೇ

**ನಂಜ**— ಅಪ್ಪಾ ! ಬುದ್ದೀ ! ಬುದ್ದೀ !! ಬೋ ದೊಡ್ಡಬುದ್ದಿ ಬುದ್ದಿ ತಮ್ಮ ಬುದ್ದಿ.

[ಹೆಜ್ಜೆಯ ಸಪ್ಪಳ]

**ರಂಗ**— ಓಹೋ ಶಾಸ್ತ್ರಿಗಳು ಬರೋಹಾಗಿದೆ ನಂಜಾ ! ಈಗ ನನ್ನ ಮುಂದ ಹೇಳಿದ್ದನ್ನೆಲ್ಲಾ ತಡಮರಿನದೆ ಅವರ ಮುಂದೇನೂ ಹೇಳು

**ನಂಜ**— ಆಗಲಿ ಬುದ್ದೀ !

[ಶಾಸ್ತ್ರಿಗಳ ಪ್ರವೇಶ]

**ರಂಗ**— ನಮಸ್ಕಾರ ಶಾಸ್ತ್ರಿಗಳಿಗೆ, ದಯಮಾಡಬೇಕು

**ಶಂಕರ**— ಸೌಖ್ಯವೇ ರಾಯರು ?

**ರಂಗ**— ತಮ್ಮಾಶಿರ್ವಾದದಿಂದ

**ಶಂಕರ**— ಏನು ನಂಜಯ್ಯ ಸಮಾಚಾರ, ಚೆನ್ನಾಗಿದ್ದೀಯಾ ?

**ನಂಜ**— ಇದೀನಿ ಬುದ್ದಿ ನಿಮ್ಮ ದಯದಿಂದ–ಆಂ, ಸಮಾಚಾರ ಇನ್ನೇನು ಬುದ್ದೀ—ಊರಾಗೆಲ್ಲಾ ಒಂದೇ ಸಮಾಚಾರ ಶಾಮಣ್ಣೋರು ಅವರಪ್ಪನ್ನಸುಟ್ಟುಬಿಟ್ಟುಬಂದು ತಿತೀ ಮಾಡದೇ ಅಂಗೇ ಕುಂತವರೇ ಅಂತ ಬುದ್ದೀ ! ರಾತ್ರಿ ಅನ್ನೆರಡು ಗಂಟೇನಾಗ ಆ ಬೀದ್ಯಾಗೆ ಒಂದು ಕಡೆಯಿಂದ ಒಂದು ಕಪ್ಪನೆ ನೆಳ್ಳು, ಅಳೋ ದನಿ ಸುರುವಾಗಿ ಅಂಗೇ ನಡೀತಾ ಬಂದು

ಇವರ ಮನೇತಾವ ಒಸಿ ಒತ್ತುನಿಂತಿದ್ದು, ಅಂಗೇ ಓಗಿ ಆ ಚೌಕದಾಗೆ ಮೆತ್ತಗಾಗಿ ಬಿಡುತ್ತೈತಂತೆ

**ರಂಗ**— ಇದೆಷ್ಟು ದಿವಸದಿಂದ—?

**ನಂಜ**— ಮೂರು ದಿವಸದಿಂದ ಬುದ್ಧೀ!

**ರಂಗ**— (ಕೃತ್ರಿಮ ಕೋಪ) ಶಾಸ್ತ್ರಿಗಳೇ! ತಿಳಿದವರೂ ಜ್ಞಾನಿಗಳೂ ಆದ ತಾವೇ ಅವನಿಗೆ ಬಲಭುಜವಾಗಿದ್ದುಕೊಂಡು, ಅವರಪ್ಪನ ಶ್ರಾದ್ಧ ಮಾಡೋದಕ್ಕೆ ಅನುವಾಗಲಿಲ್ಲವಲ್ಲ. ಇದು ಏನು ಧರ್ಮ ಸ್ವಾಮೀ! ನಾವಂತೂ ಕಟ್ಟವರು, ಕರ್ಮಭ್ರಷ್ಟರು, ಹಾಳಾಗಿ ಹೋಗಲಿ. ಆದರೆ ಶಾಸ್ತ್ರಿಗಳೂ, ಕರ್ಮಪರಾಯಣರೂ ಆದ ನೀವೇ ಹೀಗೆ ಷುರು ಮಾಡಿದರೆ ಜನಗಳು, 'ಶಾಸ್ತ್ರಿ ಕರ್ಮಭ್ರಷ್ಟ' ಅನ್ನೋದಿಲ್ಲವೇ?

**ಶಾಸ್ತ್ರಿ**— (ಯೋಚಿಸಿ) ರಾಯರೇ! ಇದರಲ್ಲೊಂದು ವಿಚಾರ.

**ರಂಗ**— ಯಾವುದೂ, ಆ ಶೀನಪ್ಪ ಸಾಯೋವಾಗ ಆಣೆ ಇಡಿಸಿಕೊಂಡಿದ್ದ ತಾನೇ?

**ಶಾಸ್ತ್ರಿ**— ಹೌದು ಹೌದು

**ರಂಗ**— ಸಾಯೋರು ಅಜ್ಞಾನದಲ್ಲಿ ಹೇಳೋದು ಆಡೋದನ್ನೆಲ್ಲಾ ಲೆಕ್ಕಕ್ಕೆ ತಗೋಂಡರೆ ಹೇಗೆಸ್ವಾಮಿ ಅಲ್ಲಾ ಸ್ವಾಮೀ! ಆ ಬ್ರಾಹ್ಮಣ ಏನೋ ಅಜ್ಞಾನದಲಿ ಕಳವಳಿಸಿದರೆ ಒಳ್ಳೇದೆ ಆಯ್ತುಂತ ಅದನ್ನೇ ಪಟ್ಟಾಗಿ ಹಿಡಿಕೊಂಡು, ಸಾವಿರಾರು ವರ್ಷಗಳಿಂದ ನಡೆದು ಬಂದಿರೋ ಕರ್ಮಗಳು ಆಗೋದಕ್ಕೆ ಅಡ್ಡಿ ಬಂದು ತಡೆದಿದೀರಲ್ಲಾ? ನಿಮ್ಮಂಥ ಶಾಸ್ತ್ರಿಗಳೇ ಈ ರೀತಿ ಕೈಯಾರ ಕರ್ಮಭ್ರಷ್ಟತ್ವಾನ ಹರಡೋದಕ್ಕೆ ಷುರು ಮಾಡಿದರೆ, ಇನ್ನೊಂದೆರಡು ವರುಷಗಳಲ್ಲೇ ಊರಿನಲ್ಲೆಲ್ಲಾ ಪ್ರೇತಗಳ ಸಂಖ್ಯೆಯೇ ನೆರೆದೀತು. ಅವುಗಳ ಕೂಗೇ ಕೂಗಾದೀತು ನಿಮ್ಮಂಥಾವರ ಮನೆಗಳು ...

**ಶಾಸ್ತ್ರಿ**— (ಚಿಂತಿತನಾಗಿ) ರಾಯರೇ! ಸ್ವಲ್ಪ ತಡೆಯಿರಿ ಸ್ವಲ್ಪ ನಿಧಾನಿಸಿರಿ!

**ರಂಗ**— ಯಾಕೆ ಸ್ವಾಮಿ ನಿಧಾನಿಸೋದು? ಮಗನ ಮೇಲಿನ ಅಭಿಮಾನದಿಂದ ಮೂರೇ ರೂಪಾಯಿನಲ್ಲಿ ಕಾಶಿ ಪ್ರವಾಸ ಮಾಡಿಕೊಂಡು ಬರು

ತೇನಂತ ಹೊರಟ ತಂದೆ, ಹಣ ಮುಗಿದು, ಕಾಡುದಾರಿ ಬಿದ್ದು ಬಾಯಾರಿ ಬಸವಳಿದು ನರಳುತಿರೋವಾಗ, ತಂದೆಗೆ ಅನ್ನ ಕಳುಹಿಸಬೇಕೂಂತಿರೋ ಮಗನ ಕೈ ಬಡಿದರೆ ಪಾಪವಲ್ಲವೇ ಸ್ವಾಮಿ? ಆ ಬಡಜೀವ ರಾತ್ರಿಹೊತ್ತು ಆ ಬೀದೀಲಿ ಅಳ್ತಾನರಳುತಾ ಹೋಗುತಾ ಇರುತ್ತಂತಲ್ಲಾ! ಇದನ್ನು ಕೇಳಿ ಕೂಡಾ ಅವರ ಪ್ರಿಯ ಮಿತ್ರರು ತಾವು ಹ್ಯಾಗೆ ಜೀವ ಬಿಗಿಹಿಡಿದಿದ್ದೀರಿ ಸ್ವಾಮಿ? ಅವರು ಬದುಕಿದ್ದಾಗ ಅವರಮೇಲಿದ್ದ ಪ್ರೇಮ ಅವರ ಹಿಂದೆಯೇ ಹೊರಟು ಹೋಯಿತೇ? ಕೀವು, ರಕ್ತ, ಹಾವು, ಚೇಳುಗಳಿಂದ ತುಂಬಿರೋ ವೈತರಣೀ ನದೀಲಿ ಬಿದ್ದು ಆ ಬಡಜೀವ ತೇಲ್ತಾ ಮುಳುಗುತಾ . .

**ಶಾಸ್ತ್ರಿ**— (ಕಿವಿಗಳನ್ನು ಮುಚ್ಚಿಕೊಂಡು ಕೂಡುವನು. ತಲೆ ಸುತ್ತಿದಂತಾಗುವುದು) ಸ್ವಾಮಿ! ನಿಮ್ಮ ದಮ್ಮಯ್ಯ! ಸ್ವಲ್ಪ ನಿಧಾನಿಸಿ ಸ್ವಲ್ಪ ಈ ಮಾತುಗಳನ್ನು ತಡೆಯಿರಿ!!

**ರಂಗ**— ನಾಳೆ ಅದೇ ಜೀವ ನಿರಾಶ್ರಿತವಾಗಿ ನಿಮ್ಮ ಕುಟುಂಬದಮೇಲೆ ಆವಾಹನೆಯಾದರೆ ಅದನ್ನ ಬಿಡಿದೋಡಿಸೋದಕ್ಕೆ ನೂರಾರು ರೂಪಾಯಿ ಖರ್ಚುಮಾಡೋದಿಲ್ಲವೇ?

**ಶಾಸ್ತ್ರಿ**— ರಾಯರೆ! ನಿಮ್ಮ ಕಾಲಿಗೆ ಬಿದ್ದೆ. ನನಗೆ ಯೋಚಿಸಲು ಅರೆಕ್ಷಣ ಬಿಡುವು ಕೊಡಿ

**ರಂಗ**— ಯಾಕೆ? ನನ್ನ ಮಾತುಗಳು ಸತ್ಯವಲ್ಲವೇನೂ? ಪ್ರಮಾಣವಲ್ಲವೇನೂ? ಗರುಡಪುರಾಣದಲ್ಲಿಲ್ಲವೇನೂ?

**ಶಾಸ್ತ್ರಿ**— ಉಂಟೂ! ಉಂಟೂ! ಉಂಟೂ! ತಮ್ಮ ಮಾತುಗಳು ಸತ್ಯ ನಾನು ಇನ್ನ್ಯಾವುದೋ ನಂಬಿಕೆಯಿಂದ ಸುಮ್ಮನಿದ್ದೆ. ಈ ಎಂಟುದಿನಗಳಲ್ಲೇ ಅವರು ಪ್ರೇತವಾಗಿರೋದು ನಿಜವಾದರೆ .

**ರಂಗ**— ಸಾರಿ .. ಏನೋ ನಂಜ?

**ನಂಜ**— ಅಯ್ಯೋ! ಇಸ್ವೇಸ್ವರ ನಾಣೆಗೂ ಬುದ್ದೀಂತಿನಿ!

**ರಂಗ**— ಶಾಸ್ತ್ರಿಗಳೇ! ಇನ್ನೂ ಎರಡುದಿನ ಪರೀಕ್ಷೆ ಮಾಡಿ.

**ಶಾಸ್ತ್ರಿ**— ಬೇಕಿಲ್ಲ! ಬೇಕಿಲ್ಲ! ನಾನು ಸ್ವಲ್ಪ ಯೋಚನೆ ಮಾಡಿ ನೋಡುತೇನೆ.

**ರಂಗ.**—ನಿಧಾನವಾಗಿಯೋಚಿಸಿ. ಹದಿಮೂರುದಿನ ಕಳೆದಮೇಲೇನೇ ಕರ್ಮ ಆರಂಭವಾಗಲಿ! ಸ್ವಾಮೀ! ಬಹಳ ಚೆನ್ನಾಗಿದೆ ನೀವು ಶಾಸ್ತ್ರಿಗಳಾದದ್ದು - ಊರಿನೋರೆಲ್ಲಾ ಹೇಳೋದನ್ನ ಕೇಳಿದಿರಾ! 'ಶಂಕರಶಾಸ್ತ್ರಿಗಳು ಶೀನಪ್ಪನ ಸಂಸಾರದಲ್ಲಿ ಕೈ ಹಾಕಿ. .'

**ಶಾಸ್ತ್ರಿ**—ರಾಮ ರಾಮ! ಕೇಳಲಾರೆ - (ಹೊರಟುಹೋಗುವನು.)

**ರಂಗ**—ನಿಮಗಿನ್ನೂ ನಂಬಿಕೆಯಾಗದಿದ್ದರೆ, ಈ ರಾತ್ರೀನೇ ಆ ಪ್ರೇತದ ಗೋಳನ್ನ ಕಿವಿಯಾರ ಕೇಳಿಬಿಡಿ

[ಶಾಸ್ತ್ರಿಯ ನಿಷ್ಕ್ರಮಣ]

**ನಂಜ.**—(ಗಾಬರಿಯಿಂದ ಮುಖ ಬಿಳುಪೇರಿ) ಬುದ್ಧೀ! ನೀವೇ ೀದ್ದೆಲ್ಲಾ ನಿಜಾನ ಬುದ್ಧೀ?

**ರಂಗ.**—ನೀನೇ ಹೇಳಿದೆಯಲ್ಲೋ!

**ನಂಜ.**—ಅದು ಸರೀ ಬುದ್ಧೀ! ಮಿಕ್ಕಿದ್ದು ಅದೇನೇನೋ ಏಳಿದಿರಲ್ಲಾ, ಅಂಗೂ ಆದಾತಾ?

**ರಂಗ.**—ಆಗದೇ ಏನೂ! ಅದೆಲ್ಲಾ ಈ ಶಾಸ್ತ್ರಿಗಳು ಬರೆದಿರೋ ಪುರಾಣದಲ್ಲೇ ಇದೆ. ನೋಡು ನಾಳೆ ಸಂಜೆಗೆ ನನ್ನ ಮನೆ ಹತ್ತಿರ ಬಾ ನಿನಗೆ ಬೇರೆ ಒಂದು ಕೆಲಸ ಹೇಳುತೀನಿ

(ಹೊರಡಲಿರುವನು)

**ನಂಜ**—(ದೈನ್ಯ ಭಯಗಳಿಂದ) ಇಂಗೇ ಬನ್ನಿ ಬುದ್ಧೀ ಓಗಾನಿ.

**ರಂಗ.**—ಇಲ್ಲ ಕಣೋ, ನನಗಿತ್ತ ಕಡೆ ಕೆಲಸಾ ಇದೆ. ನಾಳೆ ಸಂಜೆ ಮರೀಬೇಡಾ!

[ಹೊರಡುವನು.]

**ನಂಜ**—ಅಂಗೇ ಒಂಟುಬಿಟ್ಟಿರಾ ಬುದ್ಧೀ .. (ಹಿಂದೆ ಮುಂದೆ ನೋಡುವನು ಭಯವು ಅಧಿಕವಾಗುವುದು) ಯಾಕಾರ ಉಟ್ಟಿಸಿಕೊಂಡು ಏಳಾಕೋದನೋ ಈ ಪಿರೇತದ ಕತೇಯಾ! ನೆನಸಿಕೊಂಡಷ್ಟು ಜೀವ ಜಲ್ ಲ್ ಲ್ ಅಂತೈತೆ! ಅವರೇಳಿದಂಗೆ ಆಗಿಬಿಟ್ಟು, ಎದುರುಗಡೆ ಬಂದುಬಿಟ್ಟು ಕಪ್ಪನೆ ನೆಳ್ಳು...... ಕೈ ಚಾಚಿ, 'ನಂಜಾ! ಸಾವಿರ ರೂಪಾಯಿಗೆ ದಗಾ ಮಾಡಿ

ದೆಯಾ' ಅಂತ ಏಳಿ ಕುತ್ತಿಗೆ ಮಿಸಿಗಿಬಿಟ್ಟರೆ! ...ಯಪ್ಪಾ!....ಎಂದೂ ಇಲ್ಲದ್ದು ಈಪತ್ತು ನನ್ನ ಗುಂಡಿಗೆ ನಡಗತೈತೆ ಕತ್ತಲಾಯಿತು... . ಸಾಲದ್ದಕ್ಕ ಈ ದ್ಯಾವರಾಣೆ ಬೇರೆ ಮಡಗಿಬಿಟ್ಟದ್ದೀನಿ ಅಯ್ಯೊ! ಸ್ವಾಮಿ! ನಮ್ಮಪ್ಪ! ಯೆಂಕಟರಮಣ! ನಿನಗೊಂದು ರೂಪಾಯಿ ತಪ್ಪುಕಾಣಿಕೆ ಒಪ್ಪಿಸುತೀನಿ ಕಾಪಾಡು - (ಹೊರಡಲಿರುವನು ಹಿಂದಿನಿಂದ, "ನಂಜಾ!" ಎಂಬ ಕೂಗು ಇವನು ಬೆದರಿ, "ಯಪ್ಪಾ" ಎಂದು ಕಿರಚಿಕೊಂಡು ಓಡುವನು ರಾಯನು ಬಂದು ನೋಡಿ, ಮುಗುಳುನಗೆಯಿಂದ ಹಿಂದಿರುಗುವನು )

---

## ನಾಲ್ಕನೆಯ ಪ್ರವೇಶ

[ಶಾಮಣ್ಣನ ಮನೆಯ ಕೈಸಾಲೆ. ಮುರುಕು ಮಂಚವನ್ನೊರಗಿ ಸುಬ್ಬಮ್ಮ ಕುಳಿತಿರುವಳು. ಇತ್ತಕಡೆ ಪಾತಮ್ಮ ಎಲೆ ಹಚ್ಚುತ್ತಾ ಕಳಿತಿರುವಳು. ಸಂಜೆ.]

**ಸುಬ್ಬ** — ಆ ಕೋಣೆಯಲ್ಲಿನ ಹಣತೆಗೆ ಎಣ್ಣೆ ಇಲ್ಲದಂತಾಯಿತಲ್ಲಮ್ಮಾ! ಹತ್ತು ದಿವಸವೂ ಆ ಜಾಗದಲ್ಲಿ ಒಂದು ದೀಪ ಉರೀತಾನೇ ಇರಬೇಕಂತೆ ಜೀವ ಸತ್ತ ಜಾಗದಿಂದ ಸುಟ್ಟ ಜಾಗಕ್ಕೆ, ಸುಟ್ಟ ಜಾಗದಿಂದ ಸತ್ತ ಜಾಗಕ್ಕ ಅಲೆದಾಡುತಾ ಇದ್ದು, ಮಗ ಕೊಡೋ ಪಿಂಡೋದಕಗಳ ಮೇಲೆ ಜೀವಿಸಿದ್ದು ವರ್ಷದ ವೈಕುಂಠ ಸಮಾರಾಧನೆಯಾದ ಮೇಲೆ ಪಿತೃಲೋಕಕ್ಕೆ ಹೋಗುತ್ತಂತೆ.

**ಪಾತು** — ಅಮ್ಮಾ! ನಾನು ನಿನಗೆಷ್ಟು ಹೇಳಿದರೂ ಈ ಕುರುಡ ನಂಬಿಕೆಗಳನ್ನು ಬಿಡಲಾರದೆ ಸಂಕಟಪಡುತೀಯಲ್ಲಾ ಈಗ ಮಗ ಕೊಡೋ ಪಿಂಡೋದಕಗಳನ್ನ ತಗೊಳ್ಳೋದಕ್ಕೆ ಹೊಟ್ಟೆ ಬಾಯಿಗಳಿವೆಯೇ? ಈ ದೇಹ ಇರೋವರೆಗೂ ಹಸಿವು ಬಾಯಾರಿಕೆ ಇದೇ ಕಳಚಿಕೊಂಡಮೇಲೇನಿದೆ? ಪ್ರಪಂಚದಿಂದಲೇ ಮುಕ್ತನಾಗಬೇಕೂಂತಿದ್ದ ಅಪ್ಪ, ಇನ್ನೂ ಈ ಕಗ್ಗತ್ತಲು ಗೂಡಿನಲ್ಲೇ ಸೇರಿಕೊಂಡು ನೀನು ಹಣತೆ ಹಚ್ಚುತೀಯೋ ಇಲ್ಲವೋಂತ ನೋಡುತಿದಾನೆಯೇ? ಇಲ್ಲ ಅಪ್ಪನ ಆತ್ಮ ಶಾಂತವಾಗಿ ದೇವರ ಪಾದದಲ್ಲಿದೆ ನೀನು ಹೇಳೋ ಮಾತು ನಿಜವಾದರೆ, ಪ್ರಪಂಚದಲ್ಲಿ ಮಕ್ಕಳಿಲ್ಲದ ಸಹ

ಸ್ರಾರು ಜನ ಸ್ವಾಮಿಗಳು, ಬ್ರಹ್ಮಚಾರಿಗಳು, ಸಾಧುಸನ್ಯಾಸಿಗಳೆಲ್ಲಾ ಸತ್ತು ಪತರುಗುಟ್ಟುತ್ತಾ .

**ಸುಬ್ಬ:** — ಪ್ರೇತಗಳಾಗುತಾರೆ!

**ಪಾತು:** — ಎಂಥ ಮಾತನಾಡುತೀಯಮ್ಮ ! ನೀನು ಈ ಕುರುಡ ನಂಬಿಕೆಗಳನ್ನ ಬಿಡು ಮನಸ್ಸನ್ನ ಸಮಾಧಾನಕ್ಕೆ ತಂದುಕೊ

**ಸುಬ್ಬ** — ಪಾತೂ! ನನ್ನ ಜೀವಾನಾದರೂ ಒತ್ತೆ ಇಟ್ಟು ಕರ್ಮ ಪುರಾಮಾಡಿಸಿಬಿಡಬೇಕು ಕಣೇ! ದಿನಾ ರಾತ್ರಿ ನನ್ನ ಕನಸಿನಲ್ಲಿ ಅವರು ಒಂದು ಕೈ ಚಾಚಿ ಬೇಡುತಾ, 'ನನಗೆ ಹಸಿವು, ನನಗೆ ಬಾಯಾರಿಕೆ' ಅಂತ ಅಳೋ ಧ್ವನೀನ ಕೇಳಲಾರೆ ಕಣೇ! ಬಳಲಿ ಹಸಿವಿನಿಂದ ಬೆಂದ ಆ ಮುಖಾನ ನೋಡಲಾರೆ ಕಣೇ! (ಎನ್ನುತ ಧ್ವನಿ ಮೆತ್ತಗಾಗುವುದು, ಮೂರ್ಛಿತಳಾಗುವಳು ಪಾತು ಮುಂದೆ ಬಂದು ತಾಯಿಯನ್ನು ತೊಡೆಯ ಮೇಲೆ ಹಾಕಿ ಕೊಂಡು, 'ಅಮ್ಮಾ! ಅಮ್ಮಾ!' ಎನ್ನುವಳು - ಅನಂತರ, 'ಶಾಮಣ್ಣಾ! ಶಾಮಣ್ಣಾ!' ಎಂದು ಕೂಗುವಳು)

**ಶಾಮು.** — (ಒಳಗಿನಿಂದ ಓಡಿಬಂದು) ಏನು ಪಾತು?

**ಪಾತು** — ಬೇಗ ಹೋಗಿ ಒಂದು ಲೋಟ ನೀರು ತಗೊಂಡು ಬಾ. (ನೀರನ್ನು ತಂದು ನೆತ್ತಿಗೆ ತಟ್ಟಿ ಕುಡಿಸಿದ ಮೇಲೆ, ಸುಬ್ಬಮ್ಮನು ಎಚ್ಚೆತ್ತು ಮಂಚವನ್ನೊರಗಿ ಕೂಡುವಳು)

**ಶಾಮು** — (ಹತ್ತಿರ ಕುಳಿತು) ಅಮ್ಮಾ! ಇದೇಕಮ್ಮಾ ನೀನು ಹೀಗೆ ಸಂಕಟಪಡುತೀ?

**ಸುಬ್ಬ** — ಮಗೂ! ನೀನು ತಿಳಿದೋನು-ನಾನೇನು ಹೇಳಲಿ! ಆದರೂ ಶಾಮೂ, ರಾತ್ರಿ ಹೊತ್ತು ದಿನಾ ಕನಸಿನಲ್ಲಿ ಅವರು ಬಂದು ಭಿಕಾರಿ ಹಾಗ ಕೈ ಚಾಚಿ, 'ನನಗೆ ಹಸಿವು - ನನಗೆ ಬಾಯಾರಿಕೆ' ಅಂತ ಅಳ್ತಾ ನಿಂತು ಕೊಳ್ಳೋದನ್ನ ನೋಡಿ ನಾನು ಜೀವ ಬಿಗಿಹಿಡಿದು ಬದುಕಿರಲಾರೆ.

**ಪಾತು** — ಅಮ್ಮಾ ಕನಸನ್ನೆಲ್ಲಾ ನಿಜಾಂತ ನಂಬಿದರೆ ...

**ಸುಬ್ಬ** — ಒಂದು ದಿನ ಒಂದು ಕನಸಾದರೆ ಅದು ಸುಳ್ಳಾಗಬಹುದು ಆದರೆ ದಿನಾ ಒಂದೇ ಕನಸಾದರೆ ಅದು.. .

**ಪಾತು** — ನಿನ್ನ ಮನಸ್ಸಿನಲ್ಲಿ ಒಂದೇ ವಿಚಾರ ಕುದೀತಿದೆ ಅದೇ ದಿನಾ ಕನಸಾಗುತ್ತೆ. ಅಮ್ಮಾ! ನೀನು ಹೀಗೆಲ್ಲಾ ಹಂಬಲಿಸೋ ದನ್ನ ಬಿಟ್ಟು ದೂರಾಲೋಚನೆಮಾಡಿ ಶಾಮಣ್ಣನಿಗೆ ಧೈರ್ಯ ಹೇಳಬೇಡವೇ?

**ಸುಬ್ಬ:** — ಶಾಮೂ! ನಾನು ಏನು ಹೇಳಲಪ್ಪ! ನನ್ನ ಸಂಕಟ ವಿಪರೀತವಾಗಿದೆ

**ಶಾಮು** — ಅಮ್ಮಾ! ನೀನು ಸಂಕಟಪಡಬೇಡ. ನಿನ್ನ ಮನಸ್ಸಿನ ಇಚ್ಛೇನ ತಿಳಿಸು! ಅಗತ್ಯವಾಗಿ ಅದರಂತೆ ನಡೀತೇನೆ

**ಸುಬ್ಬ** — ಮಗೂ, ನೀನು ತಿಳಿದೋನು ನೂರಾರು ವರುಷಗಳಿಂದ ನಡೆದುಬಂದಿರೋ ಕರ್ಮಗಳನ್ನ ಬಿಡಬಾರದಪ್ಪಾ, ಶಾಮೂ. ಊರೋರೆಲ್ಲಾ ಒಂದೇ ಬಾಯಾಗಿ ಆಡೋದನ್ನ ಕೇಳ್ತಾ ಇದೀಯಾ! 'ಸತ್ತು ಸ್ವರ್ಗ ಸೇರ ಬೇಕಾದ ಆ ಪ್ರಾಣೀಗೆ ಮಗ ಇದ್ದೂ ನಹ ಕರ್ಮ ಮಾಡೋರಿಲ್ಲವಲ್ಲ— ಆತನಿಗೆ—ಎಂಥಾ ಪ್ರೇತಾವಸ್ಥೇಂತ ಪ್ರತಿ ಕ್ಷಣ ಆಡುತಾ ಇರೋದ್ನ ಕೇಳಿ ಕೊಂಡು ಸುಮ್ಮನಿರೋದು ಹೇಗಪ್ಪಾ' ಅಲ್ಲದೆ ದಿನಾ ರಾತ್ರಿ ಕಣ್ಣುಮುಚ್ಚಿರಲಿ, ಬಿಟ್ಟಿರಲಿ, ಅವರು ಬಂದು ನಿಂತುಕೊಂಡು ಗೋಳಾಡೋದನ್ನ ನೆನಸಿ ಕೊಂಡರೆ ನನ್ನ ಸಂಕಟ ವಿಪರೀತವಾಗುತ್ತೆ! ಮಗೂ! ನಾನು ಸತ್ತಮೇಲೆ ನನ್ನ ಕರ್ಮಕ್ಕೋಸ್ಕರ ಒಂದು ಕಾಸೂ ಸಾಲ ಮಾಡಬೇಡ ಆದರೆ ಈಗ ಏನಾದರೂ ಮಾಡಿ ಒಂಭತ್ತನೇ ದಿನ ನಾಳೆಯಿಂದ ಕರ್ಮ ಶುರು ಮಾಡಿ ಬಿಡಪ್ಪ; ಇಷ್ಟುದಿನ ಮಾಡದೇ ಬಿಟ್ಟದ್ದೇ ತಪ್ಪಾಯಿತು .. ಶಾಮು! ನಾಳೆ ಅವರ ಆಶೀರ್ವಾದದಿಂದ ನಿನಗೊಂದು ದೊಡ್ಡ ಕೆಲಸವಾದರೆ ಈಗ ನೀನು ಮಾಡೋ ಈ ಸಣ್ಣ ಸಾಲ ಭಾರವಾಗುತ್ತ್ಯೇಪ್ಪ?

**ಶಾಮು** — ಅಮ್ಮಾ! ನಾನು ಸಾಲಕ್ಕಾಗಿ ಹೆದರೋದಿಲ್ಲ! ನಿನ್ನ ಮನ ಸ್ಸಿಗೆ ಸಮಾಧಾನ ಉಂಟುಮಾಡೋದಕ್ಕಾಗಿ ನನ್ನ ಜೀವಾನಾದರೂ ಒತ್ತೆ ಇಟ್ಟು ಸಾಲ ತರುತೀನಿ ಆದರೆ ಅಪ್ಪನಿಗೆ ಕೊಟ್ಟ ಭಾಷೆ ..ಆಣೆ

**ಪಾತು** — ಅಮ್ಮಾ! ನೀನೇ ಕೈಯಾರ ಶಾಮಣ್ಣ ನನ್ನ ಈ ರೀತಿ

(ಶಾಸ್ತ್ರಿಯು ಒಂದು ಕೈಲಿ ಲಾಂದ್ರ, ಒಂದು ಕೈಲಿ ದೊಣ್ಣೆ ಹಿಡಿದು ಭಯ ಗ್ರಸ್ತನಾಗಿ ಪ್ರವೇಶಿಸುವನು)

**ಶಾಮು**— ಪಾತು! ಮಣೆ ತಂದು ಹಾಕಮ್ಮ ಶಾಸ್ತ್ರಿಗಳಿಗೆ

[ಪಾತು ದೂರದಲ್ಲಿ ಮಣೆ ಹಾಕುವಳು. ಶಾಸ್ತ್ರಿ ಕೂಡುವನು.]

**ಪಾತು**— ಶಾಸ್ತ್ರಿಗಳೇ! ಪುನಃ ಜಿಜ್ಞಾಸೆಗೆ ಆರಂಭವಾಗಿದೆ ನೀವು ಸ್ವಲ್ಪ ಸಮಾಧಾನ ಮಾಡಬೇಕು

**ಶಾಸ್ತ್ರಿ**— ನಾನು ಈ ಜಿಜ್ಞಾಸೆಯನ್ನ ಈ ದಿನ ನಿಶ್ಚಯಿಸಿಬಿಡೋಣಾಂಲೇ ಬಂದೆ (ಪಾತು ಒಳಕ್ಕೆ ಹೋಗುವಳು)

**ಸುಬ್ಬ**— ಏನು ನಿಶ್ಚಯ ಮಾಡಿದಿರಿ ?

**ಶಾಸ್ತ್ರಿ**— ಒಂದು ಹೊಸ ಸಮಾಚಾರ ಕೇಳಿದೆ ಅದು ನಿಜವೇ ?

**ಶಾಮು**— ಏನದು ?

**ಶಾಸ್ತ್ರಿ**— ರಾತ್ರಿ ಹನ್ನೆರಡು ಘಂಟೆಗೆ ಸರಿಯಾಗಿ ಈ ಬೀದಿ ಒಂದು ತುದೀಲಿ ಅಳೋಧ್ವನಿ ಆರಂಭವಾಗಿ ಬೀದಿ ಉದ್ದಕ್ಕೂ ನಡೀತಾ ಬಂದು ಮತ್ತೆ ಆ ತುದೀಲಿ ಮೆತ್ತಗಾಗಿಬಿಡುತ್ತಂತೆ. ಅಲ್ಲದೆ ಆ ಧ್ವನಿ ನಿಮ್ಮ ಮನೇ ಮುಂದೆ ಸ್ವಲ್ಪಹೊತ್ತು ನಿಲ್ಲುತ್ತಂತೆ

[ಲಾಂದ್ರವನ್ನು ಬಿಗಿಯಾಗಿ ಹಿಡಿಯುವನು]

**ಶಾಮು**— ಇದು ಯಾರು ಹೇಳಿದ್ದು ?

**ಶಾಸ್ತ್ರಿ**— ಒಂದು ಘಂಟೆ ಹೊತ್ತಿನಲ್ಲಿ ಆಗಲೇ ಹತ್ತಾರು ಜನರ ಬಾಯಿಂದ ಕೇಳಿದೆ.

**ಸುಬ್ಬ**— ಎಷ್ಟು ದಿವಸದಿಂದ ಹೀಗಾಗುತ್ತಿದೆಯಂತೆ ?

**ಶಾಸ್ತ್ರಿ**— ಮೂರು ದಿನದಿಂದ

[ಲಿಂಗಮ್ಮನು ಓಡಿಬರುವಳು]

**ಲಿಂಗ**— ಬುದ್ಧೀ! ಬುದ್ಧೀ!

**ಶಾಮು**— ಏನು ಲಿಂಗಮ್ಮ ಸಮಾಚಾರ?

**ಲಿಂಗ**— ನಮ್ಮ ಅಟ್ಟೀ ಎಲ್ಲಾ ಒಂದೇ ನಾಲ್ಗೆಯಾಗಿ ಒಂದೇ ಸಮಾಚಾರ ಮಾತಾಡ್ತಾ ಅವ್ರೆ ಬುದ್ಧೀ, ಒಂದೇ ಸಮಾಚಾರ

**ಸುಬ್ಬ**— ಅದೇನು ಹೇಳು ಲಿಂಗಮ್ಮ

**ಲಿಂಗ**—(ಕಣ್ಣೊರಸಿ ಕೊಂಡು) ದಿನಾ ರಾತ್ರಿ ಅನ್ನೆಲ್ಡು ಗಂಟೇನಾಗ ನಮ್ಮ ದೊಡ್ಡ ರಾಯರು ಪಿರೇತ ಆಗಿ ಕೆರೆ ಇಂದಿನ ದಾರೀಲಿ ಅಳ್ತಾ ಓಗ್ತಾ

ಇರುತ್ತಾರಂತೆ   ಆ ಮಾತು ಕೇಳೋಕಾಗದೆ ಓಡಿಬಂದೇರಪ್ಪ

[ಹೊರಟು ಹೋಗುವಳು]

**ಸುಬ್ಬ**  ಅಯ್ಯೋ! ಈ ಹೆಸರನ್ನ ಬೇರೆ ತಂದರೆ! ಮಗೂ ಶಾಮೂ! ಕೇಳಲಾರೆ ಈ ಮಾತುಗಳನ್ನ—ನೀನು ಏನಾದರೂ ಮಾಡಿ, ನನ್ನ ತಗೊಂಡು ಹೋಗಿ ಎಲ್ಲಾದರೂ ಒತ್ತೇನಾದರೂ ಇಟ್ಟು, ಹಣ ತಂದು ನಾಳೆಯಿಂದ ಕರ್ಮ ಶುರು ಮಾಡಿಬಿಡು

**ಶಾಮು**—ಅಮ್ಮಾ! ಸತ್ಯವಾಗಿ ನಾನು ಸಾಲಕ್ಕೆ ಅಂಜುವುದಿಲ್ಲ ಆದರೆ ಅಪ್ಪನಿಗೆ ಕೊಟ್ಟ ಆಣೆ, ಭಾಷೆ—ಪ್ರತಿಕ್ಷಣವೂ ನನ್ನ ಮನಸ್ಸನು ಇರೀತಿದೆ 'ಸಾಲ ಮಾಡಬೇಡ—ಸಾಲ ಮಾಡಬೇಡಾ'ಂತ ಅವನು ನನ್ನ ಕೈಹಿಡಿದು ಬೇಡಿಕೊಂಡ ದೈನ್ಯದೃಷ್ಟಿ ಸದಾ ನನ್ನ ಕರುಳನ್ನ ಕುದಿಸುತಿರುತ್ತೆ

**ಶಾಸ್ತ್ರಿ**—ಶಾಮೂ! ಚಿಂತಿಸಬೇಡ—ಅದಕ್ಕೇನಾದರೂ ಪ್ರಾಯಶ್ಚಿತ್ತ ಮಾಡಿಕೊಂಡರಾಯಿತು

**ಶಾಮು**—ಪ್ರಾಯಶ್ಚಿತ್ತ! ಬ್ರಹ್ಮ ಹತ್ಯ ಮಾಡಿದರೂ ಅದಕ್ಕೆ ಪ್ರಾಯಶ್ಚಿತ್ತವಿರ ಬಹುದು, ಸ್ತ್ರೀಹತ್ಯ ಮಾಡಿದರೂ ಅದಕೆ ಪ್ರಾಯಶ್ಚಿತ್ತ ವಿರಬಹುದು!! ಆದರೆ, ಸತ್ತವರ ಕೊನೆಯ ಆಶೆಯನ್ನು ತುಳಿದು ಮೆಟ್ಟಿದವನಿಗೆ ನರಕದಲ್ಲೂ ಜಾಗವಿಲ್ಲ ಶಾಸ್ತ್ರಿಗಳೇ! ಆ ದಿನ ನೀವು, 'ಶಾಮಣ್ಣ ನಿಮ್ಮ ಎಂಥ ಕಠಿಣ ಕೋರಿಕೆಯಾದರೂ ನಡೆಸದೆ ಹಿಂದೆಗೆಯುವುದಿಲ್ಲ, ಹೇಳ' ಎಂದು ಅಪ್ಪನಿಗೆ ಧೈರ್ಯ ಹೇಳಿದಮೇಲಲ್ಲವೆ, ಅವನು ತನ್ನ ಕೊನೆಯ ಆಶೆಯನ್ನ ತಿಳಿಸಿದ್ದು! ಅವನ ಆಶೆಯಾದರೂ ಎಂತಹುದು! ಅದಕ್ಕಾಗಿ ದೇಹ ದಂಡಿಸಬೇಕಾಗಿಲ್ಲ—ಹಣ ಖರ್ಚುಮಾಡಬೇಕಾಗಿಲ್ಲ. ನಾವು ಸುಮ್ಮನಿದ್ದರೆ ಅವನ ಆತ್ಮಕ್ಕೆ ಶಾಂತಿ. ಇಂತಹ ಆಶೆಯನ್ನು ತುಳಿದು ಮೆಟ್ಟಲೇ?

**ಶಾಸ್ತ್ರಿ**—ಶಾಮೂ! ನೀನು ವಿದ್ಯಾವಂತ! ನಿಮ್ಮ ತಂದೆಯವರು ಯಾತಕ್ಕೆ ಆರೀತಿ ಹೇಳಿದರು, ಸ್ವಲ್ಪ ಯೋಚಿಸು ಕರ್ಮಗಳಿಗಾಗಿ ನೀನು ಸಾಲ ಮಾಡಿದರೆ ಮುಂದೆಲ್ಲಿ ಅದರಿಂದ ನಿನಗೆ ತೊಂದರೆಯಾಗಬಹುದೊನ್ನೋ ಪ್ರೇಮದಿಂದಲೇ ಹೊರತು ಅನ್ಯಥಾ ಇಲ್ಲ; ಆದರೆ ನೀನು ಅದನ್ನೇ

ದೊಡ್ಡದಾಗಿ ಹಿಡಿದು ಕೂಡಬಾರದು. ಅವರ ವಿಚಾರದಲ್ಲಿ ನಿನಗಿರೋ ಭಕ್ತೀನ ಹ್ಯಾಗೆ ತೋರಿಸೋದು! ಏನಾದರೂ ಮಾಡಿ ನಾಳೆ ಒಂಬತ್ತನೇ ದಿನದಿಂದಲೇ ಕರ್ಮ ಶುರು ಮಾಡಿ ಆ ನಿಮ್ಮ ತಂದೆಗೆ ಒಂದು ಸದ್ಗತಿ ಕಾಣಿಸಿಬಿಡು ಮುಂದೆ ಅವರ ಆಶೀರ್ವಾದವಿದ್ದರೆ ಈ ಸಾಲಾನ ಒಂದು ತಿಂಗಳಲ್ಲಿ. ತೀರಿಸಿಬಿಡಬಹುದಲ್ಲವೇ ?

**ಶಾಮು**— ಏನು ಮಾಡಲೀ ? ಅಪ್ಪನ ಆ ದೈನ್ಯ ದೃಷ್ಟಿ ಪ್ರತಿಕ್ಷಣವೂ ನನ್ನೆದೇನ ಇರೀತಿದೆ, "ಸಾಲ ಮಾಡಬೇಡಾ"ನ್ನೋ ಅವನ ಧ್ವನಿ ಸ್ಪಷ್ಟ ವಾಗಿ ಕೇಳಿಸುತಾ ಇದೆ

**ಸುಬ್ಬ**— ಶಾಮೂ! ಮಗೂ! ಊರಿನ ಜನರೆಲ್ಲಾ ಎದ್ದೆದ್ದು ಕುಣೀತಾ ಆಡುತಿರೋ ಮಾತನ್ನ ಕೇಳಿ ನಾನಿನ್ನು ಬದುಕಿರಲಾರೆ-ನನ್ನ ಕೈಲಾಗೋಲ್ಲ- ನಾನು ಅವರ ಗೋಳನ್ನ ಕೇಳಲಾರೆ-ನೀನು ನಾಳೆ ಕರ್ಮ ಶುರುಮಾಡದಿದ್ದರೆ ನಾನು ಖಂಡಿತವಾಗಿಯೂ ಉಳಿಯೋಲ್ಲಪ್ಪಾ ಈ ಸಂಕಟದಲ್ಲೇ ಈ ಹತ್ತು ದಿನದಲ್ಲೇ

**ಶಾಸ್ತ್ರಿ**— ಶಾಮೂ ! ನಿಮ್ಮ ತಂದೆಗೆ ಕೊಟ್ಟ ಭಾಷೆ ವಿಚಾರದಲ್ಲಿ ನಾನು ಹೇಳೋದನ್ನ ಕೇಳು–"ಸಹಸ್ರಂತು ಪಿತೃನ್ಮಾತಾ–ಗೌರವೇಣಾತಿ ರಿಚತೇ"ಂತ ಹೇಳಿರೋ ಹಾಗೆ, ತಾಯಿ ತಂದೆಗಿಂತ ಸಹಸ್ರ ಪಾಲು ಗೌರವಾ ರ್ಹಳು ತಾಯಿ , ಅಲ್ಲದೆ ಸತ್ತು ಸ್ವರ್ಗವಾಸಿಯಾದ ತಂದೆ ಕೋರಿಕೆಗಿಂತ. ಬದುಕಿ ಸಂಕಟಪಡುತಿರೋ ತಾಯಿ ಕರುಳಿನ ಕೂಗು ಪವಿತ್ರವಾದದ್ದು ನೀನು ಆಕೆಯ ಕರುಳನ್ನು ಹಿಂಡಿ

**ಶಾಮು**— ಇಲ್ಲ, ಇಲ್ಲ, ಅಮ್ಮಾ ನಿನ್ನಿಷ್ಟದಂತೆ ನಾಳೆಯಿಂದ ಕರ್ಮ ಶುರು ಮಾಡುತೇನೆ

**ಸುಬ್ಬ**— ದೇವರು ನಿನಗೆ ಮನಸ್ಥೈರ್ಯ ಕೊಡಲಿ

[ಸುಬ್ಬಮ್ಮನು ಒಳಕ್ಕೆ ಹೋಗುವಳು]

**ಶಾಮು**— ಶಾಸ್ತ್ರಿಗಳೇ ! ಈಗ ಹಣಕ್ಕೇನು ಏರ್ಪಾಡು ಮಾಡುವುದು ?

**ಶಾಸ್ತ್ರಿ**— ನನಗೂ ಆ ವಿಚಾರದಲ್ಲಿ ದಿಕ್ಕೇ ತೋರದಾಗಿದೆ ನನ್ನ ಮನೇಲಿ ಒಂದು ಬೆಳ್ಳಿ ತಗಡು ಸಹಾ ಇಲ್ಲ. ಆಸ್ತಿ ಇಲ್ಲ–ಪಾಸ್ತಿ ಇಲ್ಲ.

ನನ್ನ ನಂಬಿಕೆ ಮೇಲೆ ಐವತ್ತೂ ನೂರು ಸಾಲ ಕೊಡೋರನ್ನ ಈ ಊರಿನಲ್ಲಿ ಯಾರನ್ನೂ ಕಾಣೆ

**ಶಾಮು**— ನನಗೊಂದು ಯೋಚನೆ ಹೊಳೀತಾ ಇದೆ

**ಶಾಸ್ತ್ರಿ**—ಏನದು ?

**ಶಾಮು**— ನಮ್ಮ ತಂದೆ ಅವರು ಸಾವಿರ ರೂಪಾಯಿ ಲೈಫ್ ಇನ್ಷೂರೆನ್ಸ್ ಪಾಲಿಸಿ ತೆಗದಿದ್ದರು , ಅದನ್ನ ಹೋದವರುಷ ನಂಜಯ್ಯನ ಹೆಸರಿಗೆ ಮಾಡಿಕೊಟ್ಟಿದ್ದರು ಈಗ ಅವರ ಹಣ ಬಂದಿರಬಹುದು ಹೋಗಿ ಒಂದೈವತ್ತು ರೂಪಾಯಿ ಸಾಲ ಕೇಳೋಣವೇ ?

[ರಂಗನಾಥರಾಯರ ಪ್ರವೇಶ]

**ರಂಗ**— ನಮಸ್ಕಾರ ಶಾಸ್ತ್ರಿಗಳಿಗೆ-ನಮಸ್ಕಾರ ಮಿಸ್ಟರ್ ಶಾಮಣ್ಣ ! ಏನು ? ಏನೋ ಇನ್ಷೂರೆನ್ಸ್ ಅಂತ ಮಾತನಾಡುತಾ ಇದ್ದಿರಲ್ಲ ?

**ಶಾಮು**— ಬನ್ನಿ ಕೂಡಿ ಮಿಸ್ಟರ್ ರಂಗನಾಥರಾವ್-ಬನ್ನಿ ಕೂಡಿ

**ರಂಗ**— ಇಲ್ಲ ಪರವಾಇಲ್ಲ, ಇಲ್ಲೇ ಅನುಕೂಲವಾಗಿದೆ ಏನು ಹೇಳಿ.

**ಶಾಮು**— ಏನೂ ಇಲ್ಲ ಈಗೆರಡು ವರುಷದ ಕೆಳಗೆ ನಮ್ಮ ತಂದೆಯವರ ಲೈಫಿನ ಮೇಲೆ ನೀವು ಒಂದು ಸಾವಿರ ರೂಪಾಯಿಗೆ ಇನ್ಷೂರ್ ಮಾಡಿಸಿರಲಿಲ್ಲವೆ ?

**ರಂಗ**— ಹೌದು

**ಶಾಮು**— ಹೋದವರುಷ ಅದನ್ನ ಅವರು ನಂಜಯ್ಯನ ಹೆಸರಿಗೆ ಮಾಡಿಕೊಟ್ಟರು

**ರಂಗ**—ಅದೇ, ಹಣ ಕಟ್ಟದೇ ಲ್ಯಾಪ್ಸ್ ಆದಮೇಲೆ ?

**ಶಾಮು**— ಹೌದು-ಈಗ ಅದರ ಹಣ ಬಂದಿರಬಹುದಲ್ಲವೇ ?

**ರಂಗ**—ಅದರ ಆಶೆ ಬಿಡಿ ಮಿಸ್ಟರ್ ಶಾಮಣ್ಣ ! ನಿಮ್ಮ ತಂದೆ ಅಂಥಾವರೇ ಅದಕ್ಕೆ ಪ್ರೀಮಿಯಂ ಕಟ್ಟೋದಕ್ಕೆ ಆಗಲಿಲ್ಲಾ ಅಂದಮೇಲೆ ಆ ಬಡಪಾಯಿ ಅದನ್ನ ಹೇಗೆ ನಿಭಾಯಿಸೋದು. ಅದಾಗಲೇ ಲ್ಯಾಪ್ಸ್ ಆಗಿ ಡೆಡ್ ಆಗಿಹೋಯ್ತು-ಇನ್ನೇನಾದರೂ ನನ್ನಿಂದ ಸಣ್ಣಪುಟ್ಟ ಉಪಕಾರವಾಗಬೇಕಾಗಿದ್ದರೆ....ಅಗತ್ಯವಾಗಿ ಮಾಡಿಕೊಡುತೇನೆ.

**ಶಾಮು**—(ಯೋಚಿಸುತ್ತಾ ಕೂಡುವನು)

**ಶಾಸ್ತ್ರಿ**—ನಿನ್ನೆ ನೀವು ಹೇಳಿದಿರಲ್ಲಾ ಶೀನಪ್ಪನೋರ ಕರ್ಮದ ವಿಚಾರ .

**ರಂಗ**—ಹೌದೂ!

**ಶಾಸ್ತ್ರಿ**—ನಾಳೆಯಿಂದ ಆರಂಭಿಸಬೇಕೂಂತ ಮನಸ್ಸು ಮಾಡಿದಾನೆ ಶಾಮಣ್ಣ ..

**ರಂಗ**—ಹಾಗೆ ಬನ್ನಿ ಶಾಸ್ತ್ರಿಗಳೇ, ನಿನ್ನೆ ನಾನು ಏನೇನೋ ಹೇಳಿಬಿಟ್ಟೆ ನಿಮ್ಮೆದುರಿಗೆ. ಮಿಷ್ಟರ್ ಶ್ಯಾಮಣ್ಣೋರ ವಿಚಾರದಲ್ಲಿ ನನಗಿರೋ ಪ್ರೀತಿಯಿಂದ ಹಾಗೆ ಹೇಳಿದೆನೇ ಹೊರತು ಅನ್ಯಥಾ ಇಲ್ಲ ನೀವು ಅದಕ್ಕೇನೂ ತಪ್ಪು ತಿಳಿಕೊಂಡಿಲ್ಲವಲ್ಲಾ ?

**ಶಾಸ್ತ್ರಿ**—ಏನೂ ಇಲ್ಲ-ಈಗ ಮುಂದಕ್ಕೆ ನಾಲ್ಕೈದು ದಿವಸಗಳ ವೆಚ್ಚ ಎಷ್ಟು ಕಡಿಮೆ ಅಂದರೂ ಐವತ್ತು ರೂಪಾಯಿಗೆ ಜಾಸ್ತಿಯೇ ಆಗುತ್ತೆ

**ರಂಗ**—ಅಲ್ಲವೇ? ಅಲ್ಲವೇ! ಬದುಕಿ ಬಾಳಿ ಮಾಡಿದ ಮನುಷ್ಯ, ಊರಿನಲ್ಲಿ ಗಣ್ಯರಾಗಿದ್ದೋರು. ಅವರ ಯೋಗ್ಯತೆಗೆ ತಕ್ಕಹಾಗಲ್ಲದಿದ್ದರೂನೂ ನಡೀಬೇಕಾದ ಶಾಸ್ತ್ರವಿಧಿಗಳೂ, ಕೊಡಬೇಕಾದ ದಾನ ಧರ್ಮಗಳೂ ಜರುಗದಿರುವುದಕ್ಕೆ ಆಗುತ್ತದೆಯೇ ?

**ಶಾಸ್ತ್ರಿ**—ಅದಕ್ಕೆ, ನನ್ನ ಜಾಮೀನಿನ ಮೇಲೆ ಶಾಮೂಗೆ ಈಗ ಐವತ್ತು ರೂಪಾಯಿ ಸಾಲ ಕೊಡೋರ್‍ಯಾರು ?

**ರಂಗ**—ಸ್ವಾಮೀ! ನಾವು ನಿಮ್ಮ ಒಳ್ಳೇ ದಿನಗಳಲ್ಲಿ ಒಂದು ನಾಲ್ಕು ಮಾತು ಹೇಳಿದರೆ, ನಿಮಗೆ ಹಿಡಿಯೋದಿಲ್ಲ-ಅದೂ ನಿಮ್ಮ ಒಳ್ಳೇದಕ್ಕೋಸ್ಕರ, ನಿಮ್ಮ ಸುಖಸಂಪದಭಿವೃದ್ಧಿಗೋಸ್ಕರ. ನೋಡಿ, ಮೊನ್ನೆ ನನ್ನ ಸೋದರ ಮಾವನ ಮಗ ಸುಬ್ಬರಾಯ ಶಾಸ್ತ್ರಿಯ ಹೆಣ್ಣು ಕೊಟ್ಟ ಮಾವನಿಗೆ ಒಂದಿನ್ನೂರು ರೂಪಾಯಿ ಬೇಕಾಯಿತು ಯಾರು ಕೊಟ್ಟಾರು ಸ್ವಾಮೀ ? ಏನೋ ಅವರ ಕೈಕಾಲು ಆಡುತ್ತಿದ್ದ ಸಮಯದಲ್ಲಿ ನಾನೊಂದು ಎರಡು ಸಾವಿರ ರೂಪಾಯಿಗೆ ಇಣಷೂರ್ ಮಾಡಿಸಿದ್ದೆ. ಅದಾದರೂ ಇರೋಹೊತ್ತಿಗೆ ಅದನ್ನ

ತಗೊಂಡು ಹೋಗಿ ನಮ್ಮ ಅರ್ಜುನ ಸೆಟ್ಟಿ ಹತ್ತಿರ ಆಧಾರ ಮಾಡಿಕೊಡೋ ಹೊತ್ತಿಗೆ ಹಣ ಸಿಕ್ಕಿತು, ಅವರ ಸಮಯಕ್ಕಾಯಿತು. ನಾವು ಇನ್ನೇನು ಮಾಡೋದಕ್ಕಾಗದಿದ್ದರೂ ಸರ್ವಸಾಮಾನ್ಯವಾದ, ಬಹಳ ಸುಲಭಸಾಧ್ಯವಾದ, ಇನ್ಷೂರೆನ್ಸ್-ಅದನ್ನೂ ಮಾಡದೆ ಹಟ ಮಾಡಿದರೆ, ಇಂಥಾ ಸಂದರ್ಭಗಳಲ್ಲಿ ಯಾರಾಗುತಾರೆ ಸ್ವಾಮೀ ?

**ಶಾಸ್ತ್ರಿ**— ನಿಜ, ನಿಮ್ಮ ಮಾತು ಸತ್ಯ ಆದರೆ ಈಗೇನು ಮಾಡುವುದು ? ನಾಳೆಯಿಂದ ಕರ್ಮಗಳಾರಂಭವಾಗಬೇಕು

**ರಂಗ**— ನನಗೊಂದೇ ದಾರಿ ಹೊಳೆಯುತ್ತೆ,

**ಶಾಮು**— ಏನದು ?

**ರಂಗ**— ಈಗ ನೀವು ಒಂದು ಸಾವಿರ ರೂಪಾಯಿಗೆ ಇನ್ಷೂರೆನ್ಸ್ ಪ್ರಪೋಸಲ್ ಕಳಹಿಸೋದು ಅದು ಅಕ್ಸೆಪ್ಟ್ ಆಗಿ ಬಂದ ಮೇಲೆ, ಅದನ್ನ ತಗೊಂಡು ಹೋಗಿ ಅರ್ಜುನ ಸೆಟ್ಟೀಗೆ ಆಧಾರ ಮಾಡಿಕೊಡೋದು ಹೀಗಾಗೋದಾದರೆ ನನ್ನ ಸ್ವಂತ ಜಾಮಿನಿನ ಮೇಲೆ, ಸುಲಭ ಬಡ್ಡಿ ದರದಲ್ಲಿ, ನಾನು ನೂರು ರೂಪಾಯಿ ಸಾಲ ಕೊಡಿಸುತೇನೆ

**ಶಾಸ್ತ್ರಿ**— 'ಸುಲಭದರ' ಅಂದರೆ ?

**ರಂಗ**— ಅವನ ಹತ್ತಿರ ಒಂದೇ ಬಡ್ಡೀದರ – ಚೆಂದಾಸೇಟ್‌ನ ಹಾಗೆ ದಿವಸಕ್ಕೆ ಒಂದು ಕಾಸಲ್ಲ! ತಿಂಗಳಿಗೊಂದೇ ಆಣೆ ರೂಪಾಯಿಗೆ

**ಶಾಮು**—ನಾನು ಮುಂದೆ ಸಂಸಾರ ಮಾಡೋದು ಹೇಗೆ? ಸಾಲಕ್ಕೆ ಕಟ್ಟುತಾ ಬರೋದು ಹೇಗೆ? ಇನ್ಷೂರೆನ್ಸ್ ಪ್ರೀಮಿಯಂ ಕಟ್ಟೋದು ಹೇಗೆ?

**ರಂಗ**— ಇದಕ್ಕೆ ಯೋಚನೆ ಯಾಕೆ ಮಿಸ್ಟರ್ ಶಾಮಣ್ಣ? ಈಗ ನಿಮಗೆ ಆ ಸೊಸೈಟೀಲಿ ಎಷ್ಟು ಸಂಬಳ ಬರುತ್ತೆ ?

**ಶಾಮು**— ಇಪ್ಪತ್ತೈದು ರೂಪಾಯಿ.

**ರಂಗ**— ಈಗ ನೂರು ರೂಪಾಯಿನಲ್ಲಿ ಮೂರುತಿಂಗಳ ಬಡ್ಡಿ ಮುಂಗಡ ಹಿಡಕೊಂಡು, ಮಿಕ್ಕದ್ದನ್ನ ಕೊಡುತಾನೆ-ನೀವು ತಿಂಗಳಿಗೆ ಅಸಲು ಬಡ್ಡಿ ಎರಡರಕಡೆಗೂ ಸೇರಿ ಒಂದೇಳುರೂಪಾಯಿ ಕಂತು ಕಟ್ಟುತಾ ಬನ್ನಿ ಮಿಕ್ಕ ಹದಿನೆಂಟು ರೂಪಾಯಲಿ ಸ್ವಲ್ಪ ಖರ್ಚು ಕಮ್ಮಿ ಮಾಡಿಕೊಂಡು ಹುಷಾರಿ

ನಿಂದ ಸಂಸಾರ ಜರುಗಿಸಿದರಾಯಿತು. ಈ ಮಧ್ಯೆ ದೇವರದಯದಿಂದ ನಿಮ
ಗೊಂದು ದೊಡ್ಡ ಕೆಲಸವಾಗಿಬಿಟ್ಟು, ನಿಮಗೂ ನಮ್ಮ ಮಾತಿನಲ್ಲಿ ನಂಬಿಕೆ
ಯಾಗಿ, ಇನ್ಷೂರೆನ್ಸ್ ಅನ್ನೋ ಕರ್ತವ್ಯದ ಮೇಲೆ ಶ್ರದ್ಧೆ ಹುಟ್ಟಿದರೆ
ಇನ್ನೊಂದೆರಡು ಸಾವಿರಕ್ಕೆ ಮಾಡುವಿರಿ

**ಶಾಸ್ತ್ರಿ**— ಹಾಗಾದರೆ ಈಗ ನೀವು ನಿಮ್ಮ ಜಾಮೀನಿನ ಮೇಲೆ ನೂರು
ರೂಪಾಯಿ ಸಾಲ ಕೊಡಿಸುತಿರಾ ?

**ರಂಗ**— ಅದೇ, ಸಾವಿರ ರೂಪಾಯಿ ಪಾಲಿಸಿ ತೆಗೆದು ಆಧಾರ
ಮಾಡೋದು ಖಂಡಿತವಾದರೆ ...

**ಶಾಮು**— ಈಗ ನೂರು ರೂಪಾಯಿ ಏತಕ್ಕೆ? ಐವತ್ತೇ ಸಾಕಲ್ವೆ?

**ರಂಗ**— ಒಳ್ಳೇ ಹಿಡಿತ ಮಾಡುತೀರೀ ಮಿಸ್ಟರ್ ಶಾಮಣ್ಣ! ಈಗ
ಅವನು ಮೂರುತಿಂಗಳು ಬಡ್ಡಿ ಹದಿನೆಂಟೂಮುಕ್ಕಾಲು ರೂಪಾಯಿ ಹಿಡ
ಕೊಂಡು ಮಿಕ್ಕದ್ದನ್ನ ಕೊಡುತಾನೆ ಅದರಲ್ಲಿ ಇನ್ಷೂರೆನ್ಸ್ ಪ್ರಪೋಸಲ್
ಜೊತೇಲಿ ದುಡ್ಡು ಕಟ್ಟಬೇಕು ಇಷ್ಟಾಗಿ ಇನ್ನೂ ಏನಾದರೂ ಉ-ಳಿ-ದ-ರೆ-
ಅದು ಮುಂದೆ ಬರೋ ಮಾಸಿಕ ಊನಮಾಸಿಕಗಳಿಗೆ ಆಗಬೇಕಲ್ಲವೇ?

**ಶಾಸ್ತ್ರಿ**— ನಿಜ–ನಿಜ–

**ಶಾಮು**— ನೀವು ಹೇಳೋದೆಲ್ಲಾ ನಿಜ ಆದರೆ ನನ್ನ ಮನಸ್ಸಿನಲ್ಲಿ
ಒಂದೇ ಘಾಯ; ಅದರ ಯಾತನೆ ಪ್ರತಿಕ್ಷಣವೂ ಹೆಚ್ಚುತಾ ಇದೆ.

**ಶಾಸ್ತ್ರಿ**— ಯಾವುದು ಶಾಮಣ್ಣ?

**ಶಾಮು**— ಅಪ್ಪನ ಕೊನೇ ಬೇಡಿಕೆ, ನಾನು ಕೊಟ್ಟ ಭಾಷೆ

**ರಂಗ**— ಏನು ಶಾಮಣ್ಣ! ನೀವೂಕೂಡ ತೀರ ಅಜ್ಞರ ಹಾಗೆ ಚಪಲ
ಪಡುತೀರಲ್ಲ ದಿನಾ ರಾತ್ರಿ ಹನ್ನೆರಡು ಘಂಟೇನಾಗ ನಿಮ್ಮ ತಂದೇ ಜೀವ
ಅಳ್ತಾ ನರಳ್ತಾ, ಈ ಬೀದೀಲಿ ಹರಿದಾಡುತ್ತಂತಲ್ಲಾ, ಅದನ್ನ ಕೇಳೀ ಸಹ
ನೀವು ಈರೀತಿ—

. **ಪಾತು**— (ಹಠಾತ್ತಾಗಿ ಬಾಗಿಲಿಂದ ಮುದೆಬಂದು) ಅದು ಶುದ್ಧ
ಸುಳ್ಳು ಶಾಮಣ್ಣ! ನೀನೂ ಈ ರೀತಿ ಮನಸ್ಸನ್ನ ಕೈ ಬಿಟ್ಟೆಯಾ?

[ರಂಗನಾಥರಾಯನು ಪಾತುವನ್ನೇ ನೋಡುತ್ತಿರುವನು]

**ಶಾಸ್ತ್ರಿ**—ಅವ್ಮಾ! ಪಾತಮ್ಮಾ! ಇದೊಂದು ವಿಚಾರದಲ್ಲಿ ನನಗೆ ಸ್ವಲ್ಪ ತ್ರ ಕೊಡು ನಮ್ಮ ಕುಲಕ್ಕೇ ಬಾರದ ಕೆಲಸ ಮಾಡದಿರೋಣ ನಡೀ ಣ್ಣಾ, ರಾಯರಮನೇ ಕಡೆಗ ಹೋಗೋಣ.

**ಪಾತು**—ಶಾಮಣ್ಣ! ಕಡಗೂ ಅಪ್ಪನ ಕಡೇ ಮಾತುಗಳು ನಿನ್ನ ನಸ್ಸಿನಿಂದ ಅಳಿಸಿ ಹೋದವೇ?

**ಶಾಮು**—(ವಿಚಾರಶೂನ್ಯನಾಗಿ ಕಳವಳದಿಂದ) ಬಂದ ಪಾಪವೆಲ್ಲಾ ಬರಲಿ, ಕಷ್ಟವೆಲ್ಲಾ ಬರಲಿ, ಆದರೆ ಜನರು ನಮ್ಮಪ್ಪ ಪ್ರೇತವಾಗಿವಾನೇಂತ ಮಾತ್ರ ಹೇಳದಿರಲಿ-

[ಶಾಸ್ತ್ರಿ, ಶಾಮಣ್ಣ ಮುಂದ ಹೊರಟುಹೋಗುವರು. ರಾಯನು ಪಾತುವನ್ನು ಒಮ್ಮೆ ನೇರವಾಗಿ ದಿಟ್ಟಿಸಿ ಹಿಂದೇಯೇ ಹೊರಟುಹೋಗುವನು.]

**ಪಾತು**—ಈ ದಿನ ರಾತ್ರಿ ನಾನೊಬ್ಬಳೇ ಎದ್ದಿದ್ದು, ಅದು ಯಾವ ಪ್ರೇತ ಅಳುತಾ ಹೋಗುವುದೋ ಅದನ್ನೇ ಹಿಡಿದು ಕೇಳಿನೋಡುತ್ತೇನೆ (ಶಾಮಣ್ಣನು ಹೋದಕಡೆಯೇ ನೋಡುತ್ತಾ ಕಂಬನಿದುಂಬಿ) ಶಾಮೂ! ಶಾಮಣ್ಣಾ! . . (ಗದ್ಗದಿತಳಾಗುವಳು)

## ಐದನೆಯ ಪ್ರವೇಶ

[ಅಶ್ವತ್ಥಕಟ್ಟೆಯ ಪಕ್ಕ-ಸಂಜೆ-ನಂಜ ಮತ್ತು ಗರಡಿ ಕೆಂಚ ಬರುವರು. ಕೆಂಚ ಕಟ್ಟೆಗೆ ದೊಣ್ಣೆ ಒರಗಿಸಿ ಬಂದು ಮಾತನಾಡುತ್ತಾ ನಂಜನೊಡನೆ ಕೂಡುವನು.]

**ನಂಜ**—ಕೆಂಚಣ್ಣ! ದೆವ್ವಗಳಿಗೆ ಕಣ್ಣು ಮೂಗು ಕೈಕಾಲು ಒಂದೂ ಇರಾಕಿಲ್ಲವಂತೆ, ಎಲ್ಲಾ ಒಂದು ಕಪ್ಪನೆ ಮುದ್ದೆಯಾಗಿರತ್ತೈತಂತೆ—ನಿಜವಾ?

**ಕೆಂಚ**—ಅದರಾಗೂ ತರಾವರಿ ದೆವ್ವಗಳವಪ್ಪ! ನೀನೇಳಿದ್ದು ಒಂದು ಜಾತಿ ಆಯಿತೊ, ಕೇಳು—ವಾದೊರಸ ನಾನು ಸುಬ್ಬರಾಯನ ಜಾತ್ರೆಗೆ ಓಗಿದ್ದೆನಲ್ಲಾ-ಅಲ್ಲಿ ಊರಾಚೆ ಕೆರೆ ಇಂದೆ ಒಂದು ದೊಡ್ಡ ಆಲದಮರ, ಮರದ ತುಂಬಾ ಬಿಳಿಲುಗೋಳು ಸಂಜೆ ಆಯ್ತು ಅಂದ್ರೆ ಅದರ ಕೆಳಗೆ ಕತ್ತಲೆ ಗವ್‌ವ್‌ವ್‌ವ್ ಅಂತಾ ಕಣ್ತೊಂಬೋದು. ಒಸೀ ಕತ್ತಲಾಯಿತೂಂದರೆ ಒಂದೊಂದು ಬಿಳಲೂನೂ ಇಡಿದು ನ್ಯಾತಾಡುತಾ ಇರೋವು

**ನಂಜ**— (ಹೆದರಿ ನಡುಗುತ್ತ ಮೆತ್ತನೆ ಧ್ವನಿಯಲ್ಲಿ) ದೆವ್ವ ?

**ಕೆಂಚ**— ಊಂ ಅದರಾಗೆ ಕೆಲವು ತಲೆ ಕೆಳಗು ಮಾಡಿ ತೂಗಾಡುತಾ ಇರೋವು—ಕೆಲವಕ್ಕೆ ಮೂಗು ಈಟುದ್ದ, ಕೆಲವಕ್ಕೆ ಒಟ್ಟೇ ಗುಡಾಣದಂಗೆ, ಕೆಲವಕ್ಕೆ ನಿಂತುಕೊಂಡರೆ ಕೈ ಗೋಳು ನೆಲಕ್ಕೆ ಮುಟ್ಟೋವು, ಕೆಲವಕ್ಕೆ ಆನೆ ಕಿವಿ, ಕೆಲವಕ್ಕೆ ಕತ್ತೆಮುಕ, ಕೆಲವಕ್ಕೆ ಬಾಲವಾಗೆ ಊವಿನಗಿಡ, ಕೆಲವಕ್ಕೆ ಕಣ್ಣಾಗೆ ಎಣ್ಣೇದೀಪ ಭಗ್ ಭಗ್ ಅಂತಿರೋದು, ಕೆಲವಕ್ಕೆ ಅಲ್‌ಸಾದೀಲಿ ಆನೆ ಪಟಾಕಿ ಸಿಡದಂಗೆ ಫಾಟ್ ಫಾಟ್ ಅಂತ ಸದ್ದಾಗೋದು, ಕೆಲವಕ್ಕೆ ಉಗುರುಗೋಳು ಕುಡಲಿದ್ದಂಗೆ, ಒಟ್ಟೇಲಿ ದೊಡ್ಡ ಬಾಯಿ—ಬಾಯೊಳಗೆ ಅಗೇವನಂತ ಕಣ್ಣು—ಕಣ್ಣೊಳಿಗೆ ಉರೀತಿರೋ ಪಂಜು—ನಂಜಣ್ಣಾ—

**ನಂಜ**—(ಬೆವರುತ್ತಾ) ಆಂ—?

**ಕೆಂಚ**—ಅದರಾಗೆ ಎಣ್ಣು ದೆವ್ವಗಳು ಬೇರೆ ಕಣಪ್ಪಾ !

**ನಂಜ**—(ಪಿಸುಮಾತಿನಲ್ಲಿ) ಅವನೆಂಗಾ ಗುರುತಿಸೋದು—?

**ಕೆಂಚ**—ತಲೆ ತುಂಬ ಕೆದರಿದ ಕೂದಲು, ಕೀಚ್ ಕೀಚ್ ಅಂತ ದನೀ ಮಾಡೋವು. ನೋಡು ನಂಜಣ್ಣ! ಒಂದುದಿನ ಇಂಗೇ ಜಾತ್ರೆ ಮುಗಿಸಿಕೊಂಡು ಬರ್ತಾ ಇದೀನಿ, ಸಂಜೆ ಆಗೆಬಿಟ್ಟೈತೆ. ಕೆರೆ ಇಂದಾಸೇನೇ ಓಗಬೇಕು. ದೂರ ದಿಂದ ನೋಡಿದೆ, ಎಲ್ಲಾ ಜೋತಾಡ್ತಾ ಅವೆ.

**ಕೆಂಚ**—ನಿನ್ನ ಕೈಯ್ಯಾಗೇನೂ ಇರಲಿಲ್ಲವಾ ?

**ಕೆಂಚ**—ಕುಡುಲಿತ್ತೂನ್ನು—ಆಮೇಕೆ ಮನಸ್ಸು ಕಲ್ಲುಮಾಡಿ, ಯೆಂಕ ಟರಮಣನ ದ್ಯಾನ ಮಾಡಿಕೊಂಡು, ಕಣ್ಣು ಮುಚ್ಚುಕೊಂಡು, ಆ ಮರ ತಟಾದು ಒಸಿ ದೂರ ಬಂದುಬಿಟ್ಟೆದೀನಿ ಇದ್ದಕಿದ್ದಂಗೆ ಕಾಲ್ದಸೀ ಒಂದು ನಾಯಿಮರಿ ಪುಸಕ್‌ನೆ ನುಸೀತು—

**ನಂಜ**—(ಬೆದರಿ ಕುಕ್ಕುಟಾಸನದಲ್ಲಿ ಕೂತು ಕೆಂಚನ ಹತ್ತಿರ ಸರಿ ಯುವನು)

**ಕೆಂಚ**—ಈಟೊತ್ತಿನಾಗೆ ಇಲ್ಲಿ ನಾಯಿಮರಿ ಎಲ್ಲೀದೂಂತ ಒಂದು ಜಾಡಿಸಿ ಒದ್ದೆ ಅದು ಕುಯ್ಯೋ ಪುರ್ರೊಂತ ಕೂಗ್ತಾ ಮರದಡೀಕೆ ಒಂಟೋಯ್ತು. ಆಮೇಕೆ ಒಸಿ ಒತ್ತಿನಾಗೆ ಒಬ್ಬ ಎಂಗಸು ಉವಾ ಗೀವ:

ಮುಡಿಕೊಂಡು ಅಲಂಕಾರ ಮಾಡಿಕೊಂಡು, ಇಂದಗಡೆಯಿಂದ ಬಂದ್ರು ಬುಜದಮೇಲೆ ಕೈಯಾಕಿದಳು

**ನಂಜ**— ನೀಯೇನುಮಾಡಿದೇ?

**ಕೆಂಚ**— ಕೈಯೆತ್ತಿ ಕೊಡವದೆ--

**ನಂಜ**— ಯೇ! ಅವಳಿಗೆ ನೋವಾಗಲಿಲ್ಲವಾ ಪಾಪ?

**ಕೆಂಚ**— ಅವಳೆಲ್ಲಯ್ಯಾ ಬಂತು ಅದು—ನೋಡು, ಕೈ ಕೊಡವುತ್ತಲೂ ಜುಟ್ಟಿಡೀತು. ಇಡಿದು ನಾಲ್ಕು ಒದ್ದು ತಳ್ಳಿದೆ "ಅಯ್ಯೋಂತ" ಕೂಕ್ಕೊಂಡು ಮರದಡೀಗೊಂಟೋಯ್ತು.

**ನಂಜ**— ಪಾಪ ಅವಳನ ಒದಿಯೋದ ?

**ಕೆಂಚ**— ಅವಳೆಲ್ಲಯ್ಯಾ ಬಂತು ಅದೂ—ಅದು ಎಣ್ದೆವ್ವ—

**ನಂಜ**— (ಹತ್ತಿರ ಸರಿದು) ದೆವ್ವಾಸಾ?

**ಕೆಂಚ**— ಹೂಂ—ಆಮೇಕೆ ಒಂದೆರಡೆಜ್ಜೆ ಮುಂದೆ ಬಂದಿದೀನಿ ಇಂದಿನಿಂದ ಒಬ್ಬ ಗಂಡಸು ಮುಸುಕು ಬಿಟ್ಕೊಂಡು ಬಂದು 'ಯಾಕೋ ನನ್ನೆಂಡರನ್ನೊದ್ದೆ" ಅಂದ, ತಗೋ ಅವನಿಗೂ ನನಿಗೂ ಬಿತ್ತು ಕುಸ್ತಿ--ಇಡಿದು ನಾಲ್ಕು ಬಡಿದಪ್ಪಳಿಸಿ ಅಣ್ಣಗಾಯಿ ನೀರುಗಾಯಿ ಮಾಡಿ ಬೂಮಿಗೆ ಬಡಿದು ಚಚ್ಚಿ ಎಸೆದೆ (ನಂಜ ಹಸನ್ಮುಖಿಯಾಗಿ ಪದ್ಮಾಸನ ಹಾಕಿ ಕೂಡುವನು) ಅಲ್ಲಿಂದ ಅದು ತಟ್ಟನೆ ಒಂದು ಬೆಕ್ಕಿನ ಮರಿಯಾಗಿಬುಟ್ಟು 'ಮಿಯಾವ್ ಮಿಯಾವ್' ಅಂದುಕೊಂಡು ಆಮರದಡೀಕೆ ಒಂಟೋಯ್ತು. (ಮೀಸೆ ತಿರುವಿ ಮೈಯ್ಯುಬ್ಬಿಸುವನು.)

**ನಂಜ**— (ತನ್ನ ಮೈಯನ್ನೂ ಉಬ್ಬಿಸಿಲೆತ್ನಿಸಿ) ಬೇಷ್ ಕೆಂಚಣ್ಣ! ಅನಕಾ ಆ ಮರದಾಗಿನ ದೆವ್ವಗಳೆಲ್ಲಾ ಬಂದಿದ್ದರೂ ಬಡಿದಪ್ಪಳಿಸಿ ಬಿಡುತಿದ್ದೆಯಲ್ಲವಾ?

**ಕೆಂಚ**— ಆಹಾಂ!

[ಹಠಾತ್ತಾಗಿ ದೊಣ್ಣೆ ಜಾರಿಬೀಳುವುದು. ಇಬ್ಬರೂ ಬೆದರಿ ಬೆವರುವರು]

**ನಂಜ**— (ಕೆಂಚನ ಕೈಹಿಡಿದು) ಕೆಂಚಣ್ಣ! ಈ ಮರದಾಗೂ ಎಲ್ಲೊ ಒಂದೆರಡು 'ಅವೇ' ಇರೋಂಗೈತಪ್ಪಾ!

**ಕೆಂಚ**— ಅಂಗಾ?

**ನಂಜ**— (ಬೆವರಿ) ನೋಡಯ್ಯ ಈ ದೊಣ್ಣೆ ಕೆಡವಿದ್ದಾ!!

**ಕೆಂಚ**— ಅಂಗಾರೆ ನಡಿಯಪ್ಪ ಒಂಡನಾ—

**ನಂಜ**— (ಮೆಲ್ಲಗೆ ತೆವಳುತ್ತಾ ಜೋಡನ್ನು ಕೈಲಿ ಹಿಡಿದು) ಯಾಕೆ ಕೆಂಚಣ್ಣ! ನೀನೂ ಅವಕ್ಕೆ ಎದರುತೀಯಾ?

**ಕೆಂಚ**–( ಕೃತ್ರಿಮ ಸಾಹಸ) ಎ ಹೇ! ನಾನು ಎದರೋದಾ? ಅಂಗಲ್ಲ! ನಂಜಣ್ಣ! ಈವೂರು ದೆವ್ವಗಳ ಸಮಾಚಾರ ಒಸಿ ಇಚಿತ್ರ—ಬಾ ಏಳ್ತೀನಿ–

[ತೆವಳುತ್ತಾ ಹೊರಟುಹೋಗುವರು]

## ಆರನೆಯ ಪ್ರವೇಶ

[ಅಶ್ವತ್ಥಕಟ್ಟೆಯ ಪಕ್ಕ. ಬಸವಯ್ಯನೊಬ್ಬನೇ ಕುಳಿತಿರುವನು. ಮುಖದಲ್ಲಿ ಚಿಂತಾತಿರೇಕ]

**ಬಸವ**— ಕೊನೆಗೂ ರಾಯರ ಜೀವಕ್ಕೆ ಶಾಂತಿ ಇಲ್ಲದಂಗಾಯಿತು. ಸಾಯೋ ಗಳಿಗೇಲಿ ಮಗನ ಕೈಕಾಲು ಕಟ್ಕೊಂಡು, ಬೇಡಿಕೊಂಡು. ಕಣ್ಣಾಗೆ ನೀರು ಸುರಿಸತಾ ಕೇಳಿ ಕೊಂಡರು "ನನ್ನಾಣೆಗೂ ಒಂದು ಕಾಸೂ ಸಾಲ ಮಾಡಬೇಡ ಅದು ಕಾಡುಕಿಚ್ಚಿ ನಂಗೆ ಅಬ್ಬತೈತೆ ನನ್ನ ತಿತಿ ಮಾಡದಿದ್ದರೂ ಚಿಂತೆಯಿಲ್ಲ" ಅಂತ ಸಾರಿಸಾರಿ ಏಳಿದರು ಆದರೇನಾಯಿತು ಅವರ ಮಾತು ಉಳಸಾಕೋದು ನಾನೂ ಪಾತವ್ವನೂ ಕೆಟ್ಟೋರಾದೊ. ಆ ದೊಡ್ಡವ್ವನ ಭ್ರಾಂತಿಗೆ ಶಾಸ್ತ್ರಿಗೋಳ ದೂವ. ಪಾಪ! ಆ ಶಾಮಣ್ಣೋರ ಪಾಡೋ ನಾಯಿಪಾಡು. ಅಂಗಿಂಗಾಡಿ ತಿತಿ ಮತೀಂತೆಲ್ಲಾ ತೀರಿತು. ಸಾಲ ಮಾಡಿದ ದುಡ್ಡೋ ಬೆಟ್ಟದಂಗೆ ಬೆಳೀತಾಐತೆ. ಬಡ್ಡಿ ಮುಂಗಡಾನೇ ಇಡೀತೀನೀ ಅಂದರೆ ಬ್ಯಾಡಾ ಅಂದರು. ಕಾಯಿಲೆ ಇಂದ, ಕೆಲಸಕ್ಕೆ ಓಗಿಲ್ಲ ಮೂರು ತಿಂಗಳಿಂದ ಮನ್ಯಾಗೋ ಲೊಟಪಟೆ ಕಾತು ಕಟ್ಟಲಿಲ್ಲ, ಸೆಟ್ಟಿ ದಾವಾ ಮಾಡವನೆ—ಒಂದು ನಾಕು ತಿಂಗಳಾನಾ ಸುದಾರಸದೆ ಓದನಲ್ಲಾ—ಮುಂದೇನು ಗತಿ. ಇಷ್ಟೆಲ್ಲಾದರೂನೂ ಕೊನೇಗೆ ರಾಯರು ಪಿರೇತ ಆಗವ್ರೆ ಅಂಬೋ ಮಾತಂತೂ ಎಚ್ಚತಾನೇ ಓಯ್ತು ಈ ಗೆರಡು ದಿನದಿಂದೆ ನಂಜಯ್ಯನ ಮನೆ ಮುಂದೆ ದನಿ ಕೇಳಿಸ್ತಂತೆ. ಏನಿಚಿತ್ರ!

(ಎದುರಿಗೆ ನೋಡುವನು. ನಂಜನು ಅವಸರವಾಗಿ ಬರುವನು.)

ಏನು ನಂಜಯ್ಯ ಇಂಗೋಡೋಡಿ ಬರುತಿದೀ?

**ನಂಜ**—ಏನೂಂತೇಳ್ಳಪ್ಪ, ಅವತ್ತು ರಾತ್ರಿ ಶಾಮಣ್ಣೋರ ಮನೇ ಮುಂದೆ ಸುಳೀತಂತಲ್ಲಪ್ಪಾ ಪಿರೇತ, ಅದೀಗೆಳ್ಡು ದಿನದಿಂದ ನನ್ನ ಮನೇಕಡೆ ತಿರುಗ್ತೈತಲ್ಲಪ್ಪಾ, ಮೊನ್ನೆ ನನ್ನೆಂಡರಿಗೆ ಬಂದ ಜರ ಇನ್ನೂ ಬಿಟ್ಟಿಲ್ಲ. ಬೀತಿ ಬಡದೈತೇಂತಾರೆ; ಗರ ಇಡಿದೈತೇಂತಾರೆ. ಏನು ಮಾಡಲಿ? ಯಾರತಾ ಕೋಗಲಿ!

**ಬಸವ**—ಪಾತವ್ವ ಅವತ್ತು ಏಳಿದ್ದು ನೋಡಿದ್ರೆ, ಪಿರೇತಾನೂ ಅಲ್ಲ, ಬೂತಾನೂ ಅಲ್ಲ ಯಾರೋ ಮನಸಾನೇ ಇರಬೇಕಂತ ಅನ್ನಿಸುತ್ತೈತೆ.

**ನಂಜ**—ಅದೆಂಗೇ?

**ಬಸವ**—ಅದೆಂಗೇಂತಿಯೋ, ಅವತ್ತು ರಾತ್ರಿ ಅನ್ನೆಳಡು ಗಂಟೇನಾಗ ಅವರ ಕೈಯಾಗೆ ಸಿಕ್ಕಿ ನುಲಿಚಿಕೊಂಡಾಗ, ಅದರ ಕೈಯಿಂದ ಕಳಚಿಕೊಂಡ ಒಂದು ಕಪ್ಪಾನೆ ಉಂಗರ ಇವರಿಗೆ ಸಿಕ್ಕಿತಲ್ಲಾ, ಅದನ್ನ ಮಡಿಕ್ಕೊಂಡೇ ಅವರೆ ಅವತ್ತಿಂದ ಎಂಟು ದಿನಾ ಜರಾ ಬಂತಲ್ಲ ಪಾತವ್ವಗೆ, ಆಗ "ಆ ಉಂಗರಾ ಬಿಸಾಟಬಿಡು, ಅದನಿಷ್ಟಾಂತ" ಸುಬ್ಬವ್ವಾ ಅವರೂ ಶಾಸ್ತ್ರಿಗೋಳೂ ಏಳಿದ್ದಕ್ಕೆ ಆಯವ್ವ "ಇದ್ಯಾರೋ ಮನಸಾನೇ ಇರಬೇಕು, ನಾನು ಪತ್ತೆ ಮಾಡು ತೀನೀ"ಂತ ಅದನ್ನ ಮಡಿಕ್ಕೊಂಡೇ ಅವರೆ

**ನಂಜ**—ಅವತ್ತಿಂದ ಸುಳಿದಿಲ್ಲವಂತೆ ಅತ್ತಕಡೆ ಆ ದೆವ್ವ ?

**ಬಸವ**—ಔದು.

**ನಂಜ**—ಮತ್ತೆ ನಮ್ಮನೇಕಡೇ ತಿರೀಕೊಂಡೈತಲಪ್ಪಾ ಈಗೆಳಡುದಿನ ದಿಂದ? ನಾನೇ ಕಣ್ಣಾರ ನೋಡಿದೀನಿ ಕಿಟಕಿಯೊಳಗಿಂದ ಮೊನ್ನೆ ರಾತ್ರಿ ಕಪ್ಪನೆ ನೆಳ್ಳು (ನಡಗುತ್ತಾ) ಅಂಗೇ ನಮ್ಮ ಮನೇಮುಂದೆ ತೇಲುತಾ"ಲೋ ನಂಜಾ! ಸಾವಿರ ರೂಪಾಯೀ! ದಗಾ! ದಗಾ!"ಂತ ಕೂಗ್ತಾ ಓಯ್ತಲ್ಲಪ್ಪಾ ರಾತ್ರಿ ಅನ್ನೆಳ್ಡ ಗಂಟೇನಾಗ.

**ಬಸವ**—ನಂಜಣ್ಣ! ಈವೊತ್ತು ರಾತ್ರಿ ನೀನು ಒಸಿ ಧೈರ್ಯಮಾಡಿ ಒಂದು ದೊಣ್ಣೆ ಇಡಿದು ನುಗ್ಗಿ ಬಡಿ ನೋಡೂವಾ—

**ನಂಜ**— ಪಿರೇತ ದೊಣ್ಣೇಗೆಲ್ಲಾ ಸಿಕ್ಕತ್ತೈತಾ ಬಸವಣ್ಣಾ!

**ಬಸವ**— ಪಿರೇತ ಎಲ್ಲೆಯ್ಯಾ ಬಾತೂ, ಅದು ಇನ್ನೆನೋ ಇರಬೇಕು.

ಪಾಪ! ನಮ್ಮ ರಾಯರು ಸತ್ತು ಸಂಪಗೇಮುರ ಆಗವರೆ ಅವರೆನರಿಗೆ ಇಂಥ ಅನಿಷ್ಟ ಗಂಟಾಕತಾರಲ್ಲ ಈ ಆಳು ಜನ

**ನಂಜ**— ಅಂಗಾ! ಅಂಗಾರೆ, ಈವತ್ತು ರಾತ್ರಿ ನಮ್ಮ ದೊಡ್ಡಪ್ಪನ ಮಗ ಗಲ್ಡೀ ಕೆಂಚಂಗೂ ಬರೇಳಿ, ಪಕ್ಕದಾಗೆ ದಪ್ಪ ದೊಣ್ಣೆಗಳು ಮಡಿಕೊಂಡು ಮನಗಿದ್ದು, ಒರಗಡೇ ದನಿಕೇಳುತ್ತಲೂನೂವೆ, ಬಾಕಲು ತೆಗೆದಿದ್ದೇ ಕೆಲಸ ಬಸವಯ್ಯಾ!( ...ಭಯ) ಅಲ್ಲಾ! ನುಗ್ಗೂಂತಿಯಾ ?

**ಬಸವ**— ಅಂಗಂದ್ರೇನಯ್ಯಾ! ನುಗ್ಗಿ ಚಚ್ಚಿಬಿಡು.

**ನಂಜ**—(ಎದೆಯನ್ನುಬ್ಬಿಸುತ್ತಾ) ಊಂನಪ್ಪಾ! ಬಡದೇ ನೋಡಿ ಬಿಡುವಾ ಇದ್ಯಾರು ಅನುಭವಿಸ್ಯಾರು ಈ ಸಂಕಟಾವಾ!

(ಹಿಂದಿನಿಂದ ನಂಜಾ! ಎಂಬ ಧ್ವನಿ)

**ನಂಜ**— (ಹೆದರಿ ಬಸವಯ್ಯನ ಸೊಂಟಕ್ಕೆ ತಟ್ಟನೆ ಹಾರಿ) ಬಂತಲ್ಲಪ್ಪ ಬಸವಣ್ಣಾ! (ಕಿರಿಚಿ ನಡುಗುವನು )

**ಬಸವ**— (ಅವನನ್ನು ಸಮಾಧಾನ ಮಾಡಿ ಇಳಿಸುತ್ತಾ) ನಂಜಣ್ಣಾ! ನಂಜಯ್ಯ! ನಮ್ಮ ರಾಯರು ಕೂಗಿದ್ದು. ಅಗೋ ನೋಡು ಬಾದರು

**ನಂಜ**— (ಇಳಿಯದೆ) ಆಂ? ನಮ್ಮ ರಾಯರಾ?

(ಸಿದಾನವಾಗಿ ತಿರುಗಿನೋಡುವನು)

**ರಂಗ**— ನಂಜಯ್ಯ!

**ನಂಜ**— (ಸೊಂಟದಿಂದ ಜಾರಿ) ಬುದ್ಧೀ!

**ರಂಗ**— ಬಸವಯ್ಯಾ! ಶಾಸ್ತ್ರಿಗಳು ದೇವಸ್ಥಾನದ ತೋಟದಲ್ಲಿ ಹೂ ಬಿಡಿಸುತಾ ಇದಾರೆ. ಶಾಮಣ್ಣೋರ ವಿಚಾರವಾಗಿ ತುರ್ತಾಗಿ ನೋಡಬೇಕಂತೆ–ಅಂತ ಹೇಳಿ ಅವರನ್ನ ಕರೆಕೊಂಡುಬಾ !

**ಬಸವ**— ಆಗಲಿಬುದ್ದೀ! (ಸೊಂಟವನ್ನುಹಿಡಿದುಕೊಂಡು,ನಂಜನಕಡೆ ತಿರುಗಿನೋಡಿ ಹೋಗುವನು. ನಂಜನು ಲಜ್ಜೆಯಿಂದ ತಲೆ ತಗ್ಗಿಸುವನು)

**ರಂಗ**— ಕೇಳಿದೆಯೇನಯ್ಯ ಈ ಹೊಸ ಸುದ್ದಿ !

**ನಂಜ**—ಏನುಬುದ್ಧಿ ಅದು ?

**ರಂಗ**— ನಿನ್ನ ಮನೇಮೇಲೆ ಯಾವುದೋ ಪೀಡೆ ದೃಷ್ಟಿ ಹಾಕಿದೆಯಂತೆ.

**ನಂಜ**— ಯಾರು ಹೇಳಿದರು ಬುದ್ಧಿ.

**ರಂಗ**— ನಮ್ಮ ಸೋದರಮಾವನ ಮಗ ಸುಬ್ಬರಾಯ ಶಾಸ್ತ್ರಿಗಳೂ—ನಿನ್ನ ಹೆಂಡತಿಗೆ ಜ್ವರ ಬಂದಿದೆಯಲ್ಲಾ ಅದರ ವಿಚಾರವಾಗಿ ಕೇಳಿದೆ ಅವರು ಎಲ್ಲಾ ಲೆಕ್ಕಾಚಾರ ಹಾಕಿ ಕವಡೆ ಹಾಕಿ ಪ್ರಶ್ನೆ ನೋಡಿ ಹೇಳಿದರೂ— ನಿನ್ನ ಗ್ರಹಗತಿ ಚೆನ್ನಾಗಿಲ್ಲವಂತೆ. ಶನಿ ಬಹಳ ಕ್ರೂರವಾಗಿದಾನಂತೆ. ನಿನ್ನ ಮನೇ ಮೇಲೆ ಯಾವುದೋ ಪೀಡೆ ದೃಷ್ಟಿ ಹಾಕ್ಕೊಂಡು ನಿಮ್ಮಿಬ್ಬರ ಜೀವಕ್ಕೂ ತೊಂಚು ಹಾಕುತಾ ಇದೆಯಂತೆ ಅದರಿಂದಾನೆಯಂತೆ ನಿನ್ನ ಹೆಂಡತೀಗ ಕಟ್ಟ ಜ್ವರಾ ಬರುತಾ ಇರೋದು.

**ನಂಜ**— (ಯೋಚಿಸಿ ಪಶ್ಚಾತ್ತಾಪದಿಂದ) ನಾನೇನೊ ನಮ್ಮ ದೊಡ್ಡ ರಾಯರಿಗೆ ವಂಚನೆ ಮಾಡಿದೆ; ಆದರೆ ಅವರಿಂಗೆ ಪಿರೇತ ಆಗವರಾ ಬುದ್ದೀ ?

**ರಂಗ**—ಅವರೇ ಪಿರೇತ ಆಗುವರೋ ಇಲ್ಲವೊ?

**ನಂಜ**—ಅವರೇ, ಅಲ್ಲದಿದ್ದರೆ "ನಂಜಾ! ಸಾವಿರ ರೂಪಾಯೀ! ದಗಾ! ದಗಾ!" ಅಂತ ಕೂಗುತಿತ್ತೇ ಬುದ್ದಿ ಆ ಕಪ್ಪನೇನ ನೆಳ್ಳು-ರಾತ್ರಿ ಅನ್ನೆಳ್ಡು ಗಂಟೇನಾಗ—?

**ರಂಗ**—ಅದನ್ನ ಚರ್ಚೆಮಾಡಿ ಈಗೇನು ಪ್ರಯೋಜನ? ಬಂದಿರೋ ವಿಪತ್ತಿನಿಂದ ಪಾರಾಗಬೇಕಾದುದು ಮುಖ್ಯ ಅಲ್ಲವೇ ?

**ನಂಜ**— ನೀವೇ ಏನಾರಮಾಡಿ ಕೈಯಿಡಿದು ಕಾಪಾಡಬೇಕು ಬುದ್ದೀ!

**ರಂಗ**—ನಾನು ಸುಬ್ಬರಾಯ ಶಾಸ್ತ್ರಿಗಳನ "ಇದರಿಂದ ಬಿಡುಗಡೆ ಹ್ಯಾಗೆ?" ಅಂತ ಕೇಳಿದೆ. ಅವರು ಹೇಳಿದರು— ಎರಡುದಿನ ಸಹಸ್ರನಾಮ, ಚಂಡಿಪೂಜೆ, ನವಗ್ರಹಜಪ, ಮಾಡಿ ಅನಂತರ ಆ ಗ್ರಹವನ್ನು ಬಂಧಿಸಿ ಅದನ್ನ ತಗೊಂಡು ಹೋಗಿ ಊರಾಚೆ ತೋಪನಲ್ಲಿರೋ ದೊಡ್ಡ ಬಸರೀ ಮರದ ಮಧ್ಯದ ಕೊಂಬೇಲಿ ಬಡಿದು, ವಾಪಸ್ಸು ಬಂದು, ಹನ್ನೆರಡು ಘಂಟೆ

ಗಳಕಾಲ ತಣ್ಣೀರಿನಲ್ಲಿ ಕೂತುಕೊಂಡು ಪ್ರಾಯಶ್ಚಿತ್ತ ಮಾಡಿಕೋ ಬೇಕೂಂದ್ರಪ್ಪ.

**ನಂಜ**— ಅದರಿಂದ ನಿಜವಾಗಿಯೂ ಈ ಗರ ಬಂದಾಗತ್ತೈತ ಬುದ್ದೀ!

**ರಂಗ**— ಖಂಡಿತವಾಗಿಯೂ ಬಂದಾಗಿಬಿಡುತ್ತೆ.

**ನಂಜ**— ಅಂಗಾರೆ ಪೂಜೆ ಆಕಸೇಬಿಡಾನೇಳಿ ಬುದ್ದಿ.

**ರಂಗ**— ಅದರ ಖರ್ಚೆಲ್ಲಿಂದ ತರೋದಪ್ಪಾ? (ಯೋಚಿಸುವನು)

**ನಂಜ**— ಎಷ್ಟಾಗತ್ತೈತ್ರ ಬುದ್ದೀ?

**ರಂಗ**— ಆ ಗ್ರಹ ಬಂಧಿಸಿ, ಬಸರೀಮರದಲ್ಲಿ ಬಡಿದು, ಪ್ರಾಯಶ್ಚಿತ್ತ ಜಪಾಮಾಡಿ, ನಂತರ ನಿನ್ನ ಹೆಂಡತೀಗೆ ತಾಯತಿ ಕಟ್ಟೋವರೆಗೆ ಐವತ್ತು ರೂಪಾಯಿ ಖರ್ಚಾಗತ್ತೇಂತ ಹೇಳಿದರು

**ನಂಜ**— ಐವತ್ತು ರೂಪಾಯೀ?—(ಭ್ರಾಂತನಾಗಿ ನಿರಾಶನಾಗುವನು)

**ರಂಗ**— ಕೇಳೋ! ನಾನು "ನಂಜ ಬಡವ! ಐವತ್ತು ರೂಪಾಯಿ ಪಾಪ ಎಲ್ಲಿಂದ ತಂದು ಕೊಟ್ಟಾನೂಂತ" ಒಂದು ಘಂಟೆ ಅವರಿಗೆ ಹೇಳಿ, ಕಡೆಗೆ ಇಪ್ಪತ್ತೈದು ರೂಪಾಯಿಗೆ ಒಪ್ಪಿಸಿಬಂದೆ

**ನಂಜ**— ಇಪ್ಪತ್ತೈದು ರೂಪಾಯಿತಾನೆ ಎಲ್ಲಿಂದ ತರಲಿ ಬುದ್ದೀ ?

**ರಂಗ**— ತರದಿದ್ದರೆ ಬಿಡು—ನನಗೇನು! ಅಲ್ಲವೋ ನಂಜಯ್ಯಾ! ನಿನ್ನ ಹೆಂಡತಿ ಜೀವಕ್ಕಿಂತ ಹೆಚ್ಚೇನೂ ಹಾಳು ಇಪ್ಪತ್ತೈದು ರೂಪಾಯಿ? ಆ ದಿನ ನಾನು 'ಬಡವಾ ಬದಿಕ್ಕೊಳ್ಳೀಂತ' ಸುಮ್ಮನೆ ಇಪ್ಪತ್ತೈದು ರೂಪಾಯಿ ಕೊಟ್ಟುಬಿಡುಬಹುದಂತೆ; ನೀನು ಈಗ ನಿನ್ನ ಮತ್ತು ನಿನ್ನ ಹೆಂಡತೀ ಜೀವಕ್ಕೆ ಹೊಂಚುಹಾಕತಾಇರೋ ಗ್ರಹ ಬಂಧಿಸೋದಕ್ಕೇಂದರೆ ಇಪ್ಪತ್ತೈದು ರೂಪಾಯಿ ಕೊಡೋಕಾಗಲ್ಲವೇ! ಕೊಡದಿದ್ದರೆ ಬಿಡು. ನನಗೇನು (ವಿಮುಖ ನಾಗುವನು)

**ನಂಜ**— (ಕ್ಷಣಕಾಲ ಯೋಚಿಸಿ) ನಿಜವಾಗಿಯೂ ಆ ಗರಾವ ಬಂಧಿಸಿ ಬಿಡುತಾರಾ ಬುದ್ದೀ ಸುಬ್ಬರಾಯ ಶಾಸ್ತ್ರಿಗೋಳೂ?

**ರಂಗ**— ಕೇಳೋ! ಅವರು ಸಂಕಲ್ಪ ಮಾಡಿದಮೇಲೆ, ಆವತ್ತು ರಾತ್ರೀ ಯಿಂದ ಆ ಗ್ರಹ ಏನಾದರೂ ನಿನ್ನ ಮನೇಮುಂದೆ ಸುಳಿದಿದ್ದೇ ಆದರೆ, ಆ

ಇಪ್ಪತ್ತೈದು ರೂಪಾಯಿ ಜೊತೆಗೆ ಇನ್ನೂರು ರೂಪಾಯಿ ಸೇರಿಸಿ ಕೊಡುತೀ ನೀಂತ ರಿಜಿಸ್ಟರ್ ಕಾಗದದಲ್ಲಿ ಪತ್ರ ಬರೆದು ಕೊಡುತೀನಿ–ಸರಿಯೇನೋ ?

**ನಂಜ**— ಅಂಗೇ ಮಾಡಿಬಿಡಿ ಬುದ್ದೀ. ಅಗಲೂ ರಾತ್ರೆ ಇಟ್ಟು ಇಲ್ಲದೆ ಯಾರು ಅನುಬವಿಸೋರು ಈ ಸಂಕಟಾವ! ಅಂಗಾರೆ ನಾನು ಈಗಲೇ ನಮ್ಮ ಳ್ಳೀಕಡೆ ಓಗಿ ದುಡ್ಡು ಜತೆ ಮಾಡಿಕೊಂಡು ಬರ್ತೀನಿ . ಆದರೂ ಇಪ್ಪತ್ತೈದು ರೂಪಾಯ ನಾನೆಂಗೊದಗಿಸಲಿ?.... ಸೀದ ತಮ್ಮನೀಗೆ ಬರಲ್ರ?

**ರಂಗ**— ಸೀದಾ ನಮ್ಮನೇಗೇ ಬಾ

**ನಂಜ**— ಸುಬ್ಬರಾಯ ಶಾಸ್ತ್ರಿಗೋಳು ?

**ರಂಗ**— ಅವರು ಅಲ್ಲಿಗೇ ಬಂದಿರುತಾರೆ.

**ನಂಜ**— ಅಂಗಾರೆ ನಾನು ಒಂಡತೀನಿ ಬುದ್ದೀ! (ಹೊರಡಲಿರುವನು)

**ರಂಗ**— ನಂಜಾ!

**ನಂಜ**— ಬುದ್ದೀ !

**ರಂಗ**— ನೀನು ಸಂಜೆ ಏಳುಗಂಟೆಮೇಲೆ ಬಾ ಮನೇಹತ್ತಿರ; ಅದಕ್ಕೆ ಮುಂಚೆ ನಾನು ಮನೇಲಿರೋದಿಲ್ಲ

**ನಂಜ**— ಆಹಾಂ! ನಂಗೊತ್ತಿಲ್ಲವರ ಬುದ್ದೀ ತಮ್ಮ ಟೇಮು! (ನಂಜನ ನಿಷ್ಕ್ರಮಣ)

**ರಂಗ**— ಅಂತೂ ಕೈಬಿಟ್ಟದ್ದ ಇಪ್ಪತ್ತೈದು ರೂಪಾಯಿ ಮತ್ತೆ ಕೈಯಿಗೆ ಬಂದಹಾಗಾಯಿತು ಶಾಮಣ್ಣನ ಪ್ರಪೋಸಲ್ಲಂತೂ ಹಿಡೀಲಿಲ್ಲ ಆ ಶುಷ್ಕ ದೇಹ ಇನ್ನೆಷ್ಟುದಿನ ತಡೆಯುತ್ತೋ ಅನುಮಾನ. ಅಂತೂ ಕೋರ್ಟಿನಲ್ಲಿ ನಾಡಿದ್ದು ಅದು ಡಿಕ್ರೀ ಆಗಿಬಿಟ್ಟರೆ, ನನ್ನ ಹಣ ಪುನಃ ಸೆಟ್ಟಿ ಪೆಟ್ಟಿಗೇಲಿ ಸುರಕ್ಷಿತವಾಗಿರುತ್ತೆ. (ಸಪ್ಪಳ) ಓಹೋ ಶಾಸ್ತ್ರಿ ಬಂದನೇನೋ—

**ಶಂಕರ**— (ಪ್ರವೇಶಿಸಿ) ನಮಸ್ಕಾರ ರಾಯರಿಗೆ–

**ರಂಗ**— (ರೇಗಿ) ನೋಡಿದಿರೇನ್ರೀ ನಿಮ್ಮ ಶಾಮಣ್ಣನ ಯೋಗ್ಯತೇನ!

**ಶಂಕರ**— ಸ್ವಾಮಿ........

**ರಂಗ**— ಅಲ್ಲರೀ! ಆ ಇನ್ಷ್ಯೂರೆನ್ಸ್ ಪ್ರಪೋಸಲ್‌ನಲ್ಲಿ ನಿಮ್ಮ ತಂದೆ ಯಾವ ಖಾಯಿಲೆಯಿಂದ ಸತ್ತರೂನ್ನೋದಕ್ಕೆ ಟೈಫಾಯಿಡ್ ಅಂತ ಬರೀಂತ

ಗಿಣೀಗೆ ಹೇಳಿದಹಾಗೆ ಹೇಳಿದ್ದರೆ, ಅಕೇಷನಲ್ ಫಿಟ್ಸ್-ಮೂರ್ಛೆ ರೋಗಾಂತ ಬರೆದು ಕೂರಿಸಿಬಿಟ್ಟು, ನಾನು ಆ ಪ್ರಪೋಸಲ್‌ನ ಮುಂದಕ್ಕೆ ಕಳುಹಿಸದ ಹಾಗೆ ಮಾಡಿದಾ ?

**ಶಂಕರ**— ಸ್ವಾಮಿಾ! ಶಾಮಣ್ಣನ ಸ್ವಭಾವ ತಮಗಿನ್ನೂ ತಿಳೀದು ಅವನು ಪ್ರಾಣ ಹೋದರೂ ಸುಳ್ಳು ಹೇಳೊಲ್ಲಾಂತ ಆಣೆ ಇಟ್ಟುಕೊಂಡಿದಾನೆ ರಾಯರೆ.

**ರಂಗ**— (ರೋಗಿ) ಕಂಡಿದೀನಿ ಬಿಡಿರಿ ನಿಮ್ಮ ಆಣೆ ರೂಪಾಯಿಗಳನ್ನ ಸಾಲಾಮಾಡಿ ತಿಥಿ ಮಾಡೊಲ್ಲಾಂತ ಅಪ್ಪನಿಗೆ ಭಾಷೆಕೊಟ್ಟು, ಅದನ್ನ ಈಗ ಮುರಿದು ಒಲೆಗೆ ಹಾಕಬಹುದಂತೆ, ಈಗ ತನ್ನ ಮಾತುಳುಸಿಕೊಳ್ಳೋ ಕಾದ್ರು ಸುಳ್ಳು ಹೇಳೊಲ್ಲಾನ್ನೋ ಆಣೇನ ಮುರೆಯೋದಕ್ಕಾಗಲಿಲ್ಲವೇನೋ ಅಲ್ಲವೇ ?

**ಶಂಕರ**— ಸ್ವಾಮಿಾ! ನಾನು ಏನು ಹೇಳಲಿ. (ವಿನೀತನಾಗುವನು.)

**ರಂಗ**— ನಾಡಿದ್ದು ಹಿಯರಿಂಗು ಸಮನ್ಸ್ ಬಂತೋ ?

**ಶಂಕರ**— ಇನ್ನೂ ಬಂದಿಲ್ಲ. ರಾಯರೇ! ನೀವುಯಾಕೆ ಹೀಗೆ ದುಡುಕು ತೀರಿ, ಸ್ವಲ್ಪ ಆ ಬಡಪಾಯಿ ಮೇಲೆ ದಯ ತೋರಿಸಿ

**ರಂಗ**— ಅಲ್ಲರೀ! ನಾನು ಜಾಮಿಾನಾಗಿ ಸಾಲಕೊಡಿಸಿದ್ದೇ ತಪ್ಪಾಯಿ ತಲ್ಲವೇ ?

**ಶಂಕರ**— ಶ್ರಾದ್ಧಾದಿ ಕರ್ಮಗಳ ಗಲಾಟೇಲಿ ದಿನಕ್ಕೆ ಮೂರು ನಾಲ್ಕು ಬಾರಿ ತಣ್ಣೀರಿನಲ್ಲಿ ಮುಳುಗಿ ಮುಳುಗಿ ಕಾಯಿಲೆಬಿದ್ದ, ಇಲ್ಲದಿದ್ದರೆ ಅವನ ಸಂಬಳ ಅವನ ಕೈಗೆ ಬಂದು ಸಾಲಕ್ಕೆ ಕಂತನ್ನಾದರೂ ಕಟ್ಟುತ್ತಿದ್ದ.

**ರಂಗ**— ನೋಡೀ, ನಂಗದೊಂದೂ ಗೂತ್ತಿಲ್ಲ. ನೀವು ಅದರ ವಿಚಾರ ಏನಿದ್ರು ಆ ಅರ್ಜುನ ಸೆಟ್ಟಿನ ಹತ್ತಿರ ಮಾತಾಡಿಕೊಳ್ಳಿ ಆಂ, ನೀವು ಖಾಯಿಲೇನ್ನುತ್ತಲೂ ನನಗೆ ಜ್ಞಾಪ್ಕಬಂತು— ನೋಡೀ— ನಾನು ಮೊನೆ ಬೆಂಗಳೂರಿಗೆ ಹೋಗಿದ್ದಾಗ ಅಕಸ್ಮಾತ್ ಅಲ್ಲಿ ಒಬ್ಬ ದೊಡ್ಡ ದೇವಿ ಉಪಾಸ ಕರ ದರ್ಶನವಾಯಿತು. ಅವರ ಹತ್ತಿರ ಹೀಗೆ ನಮ್ಮ ಬಿಸಿನೆಸ್ಸು ವಿಚಾರ ಅದೂ ಇದೂ ಮಾತನಾಡ್ತ, ಆ ದಿನ ಆ ಶಾಮಣ್ಣನ ತಂಗೀಗೆ ಆ ಪ್ರೇತದ

ಕೈಯಿಂದ ಬಿಡಿಸಿಕೊಳ್ಳೋವಾಗ ಒಂದು ಉಂಗುರ ಸಿಕ್ಕಿತೂಂದ್ರಲ್ಲ ಅದರ ವಿಚಾರವಾಗಿ ಕೇಳಿದೆ. ಅವರು ಹೇಳಿದರೂ—ಅದು ಮನೇಲಿರೋವರೆಗೂ ಮನೇಲಿ ಯಾರಾದರೂ ಖಾಯಿಲೆ ಬೀಳ್ತಾನೆ ಇರ್ತಾರಂತೆ. ಅದನ್ನ ಕೈಯಾರ ಎತ್ತಿ ಬಿಸಾಟರೆ ಅವರ ಕಣ್ಣುಗುಡ್ಡೆಗಳು ಸಿಡಿಯುತ್ತವಂತೆ; ಅದನ್ನ ದಾಟಿ ದೋರಿಗೆ ಆಯುಸ್ಸು ಕ್ಷಯಿಸುತ್ತಂತೆ. ಹೀಗೆ ಅಪ್ಪಣೆ ಕೊಡಿಸಿದರು.

**ಶಂಕರ**—(ಗಾಬರಿಯಿಂದ) ಹಾಗಾದರೆ ಅದರಿಂದ ನಿವೃತ್ತಿಯಾಗೋ ಬಗ?

**ರಂಗ**—ಅದೇನೋ! ನೋಡಿ, ಆ ಉಂಗರ ಮನೆಗೆ ಬಂದ ದಿನವೇ ಆ ಹುಡುಗಿ ಕಾಯಿಲೆಬಿದ್ದು ಅನೇಕದಿನ ನರಳಿ ಎದ್ದಿತು. ಆಮೇಲೆ ಶಾಮಣ್ಣ ತಿಂಗಳುಗಟ್ಟಲೆ ಖಾಯಿಲೆ ಈಗ ಅವರಮ್ಮನಿಗೆ ಖಾಯಿಲೆ.

**ಶಂಕರ**—(ಸ್ವಗತ) ನಿಜವಿರಬಹುದು! (ಪ್ರಕಾಶ) ಹಾಗಾದರೆ ಅದನ್ನ ಏನಮಾಡಬೇಕೂಂತ ಹೇಳಿದರು?

**ರಂಗ**—ಏನಾದರೂ ಮಾಡಬಹುದು!

**ಶಂಕರ**—ಅಂದರೇನುಮಾಡಬೇಕು? ದಯವಿಟ್ಟು ತಾವೇ ಅಪ್ಪಣೆ ಕೊಡಿಸಿ.

**ರಂಗ**—ಹಾಗಾದರೆ ಒಂದು ಉಪಾಯಮಾಡಿ; ಅದನ್ನ ಒಂದು ಡಬ್ಬೀಲಿ ಜೋಪಾನವಾಗಿಟ್ಟು, ಮುಚ್ಚಳ ಭದ್ರವಾಗಿ ಮುಚ್ಚಿ, ಎಲ್ಲೂ ಬೀಳಿಸದಹಾಗೆ ನನ್ನ ಕೈಗೇನೇ ತಂದುಕೊಡಿ ಬರೋವಾರ ನಾನು ಹೇಗೂ ಬೆಂಗಳೂರಿಗೆ ಹೋಗುತೀನಲ್ಲಾ, ಆಗ ತಗೊಂಡೋಗಿ ಅವರ ಕೈಗೆ ಕೊಟ್ಟು ಬಿಡುತ್ತೇನೆ ಆಮೇಲೆ ಅವರ ತಲೆ ಪಾಡು.

**ಶಂಕರ**—ಮೊದಲು ಈ ಕೆಲಸಮಾಡುತೇನೆ. ಆದರೆ ರಾಯರೆ, ಪಾಪ ಆ ಬಡಪಾಯಮೇಲೆ ಕೃಪೆಯಿಟ್ಟು ಆ ಕೇಸನ್ನ... (ವಿನಯದಿಂದ ನೋಡುವನು)

**ರಂಗ**—ನೋಡಿ ನನ್ನ ಕೈಲೇನೂ ಇಲ್ಲ; ನೀವು ಬೇಕಾದರೆ ಆ ಅರ್ಜು ನಸೆಟ್ಟೀನೇ ಕೇಳಿ....ಅಂ೦೦..ನೀವು ಆ ಉಂಗುರಾ ತರೋಹಾಗಿದ್ದರೆ, ಹುಷಾರಾಗಿ ಎಲ್ಲೂ ಬೀಳಿಸದಹಾಗೆ ನನ್ನ ಬಳಿಗೇನೇ ತಗೊಂಡುಬನ್ನಿ. (ಹೊರಡುವನು)

**ಶಂಕರ**—(ನಿಟ್ಟುಸಿರುಬಿಡ್ತು) ಕೊನೆಗೂ ರಾಯರ ಮಾತೇ ಸತ್ಯವಾಯಿತು. ಸಾಲ ಶೂಲವಾಯಿತು. ಆದರಿಂದ ಆ ಪ್ರಾಣಿಕೊರಗು ಕಾಡುಕಿಚ್ಚಾಯಿತು ಅವನೀದುಸ್ಥಿತೀಗೆ ನಾನೇ ಕಾರಣವಾದೆ. ನನಗಿನ್ನೇನು ಗತಿ ಬರುತ್ತೋ . ಏನಾದರೂ ಆಗಲಿ ಮೊದಲು ಆ ಉಂಗುರಾನ ಮನೇಯಿಂದ ದಾಟಿಸಿಬಿಡ್ತೇನೆ.

(ನಿಷ್ಕ್ರಮಣ)

---

## ಏಳನೆಯ ಪ್ರವೇಶ

[ಶಾಮಣ್ಣನ ಮನೆ ಹಜಾರ. ಸುಬ್ಬಮ್ಮ ಲಿಂಗಮ್ಮ ಮಾತನಾಡುತ್ತಾ ಕುಳಿತಿರುವರು.]

**ಸುಬ್ಬ**—ಶಾಮೂಕಾಲಿಗೆ ನಾನೇ ಕೈಯಾರ ಸಂಕೋಲೆ ತೊಡಿಸಿದಹಾಗಾಯಿತು. ನಾವಿಲ್ಲಿದ್ದಷ್ಟೂ ಅವನ ಖರ್ಚಿಗೆ ದಾರಿಯೇ ಅಲ್ಲದೆ, ಒಂದು ಕಾಸಿನಷ್ಟೂ ಉಪಯೋಗವಿಲ್ಲ. ಈ ದಿನ ಕೋರ್ಟಿನಲ್ಲಿ ಏನು ತೀರ್ಮಾನವಾಗುತ್ತೋ ನೋಡಿಕೊಂಡು, ಮುಂದಿನ ದಾರಿ ತೀರ್ಮಾನ ಮಾಡುತೇನೆ

**ಲಿಂಗ**—ಅಂಗಂದರೇನವ್ವ ?

**ಸುಬ್ಬ**—ಕೋರ್ಟಿನಲ್ಲಿ ಇವತ್ತು ಕೇಸೇನಾದರೂ ಶಾಮೂಗೆ ಪ್ರತಿಕೂಲವಾದರೆ ನಾನು ನಾಳೆ ಪಾತೂನ ಕರಕೊಂಡು ಅವಳ ಮಾವನೂರಿಗೆ ಹೊರಟುಹೋಗುತೀನಿ ಅವರಿನ್ನಾಗ ಬಂದು "ಪಾತೂನ ಕಳಿಸಿ, ಪಾತೂನ ಕಳಿಸಿ" ಅಂತ ಮೇಲಿಂದಮೇಲೆ ಕಾಗದ ಬರೀತಿದ್ದ ಅವನೂ ಮುದುಕ, ದಿಕ್ಕಿಲ್ಲ, ಅವನೂ ಸಧ್ಯ ನಮ್ಮ ಚಿಕ್ಕಪ್ಪನ ಮಗನೇ ಆಗಬೇಕಲ್ಲವೇ ? ಅಲ್ಲಿಗ ಹೋಗಿ ಅವನ ಕೈಕಾಲಾದರೂ ಕಟ್ಟ ಶಾಮಣ್ಣನಿಗೆ ಒಂದಷ್ಟು ದುಡ್ಡಿನ ಸಹಾಯ ಮಾಡೋಹಾಗೆ ತದ್ಬೀರು ನಡೆಸುತೇನೆ.

(ಪಾತು ಒಳಗಿನಿಂದ ಬರುವಳು.)

**ಸುಬ್ಬ**—ಬಾ, ಪಾತೂ! ಕೂತುಕೋ! ನಾನೇ ಇಷ್ಟು ಅನರ್ಥಕ್ಕೂ ಕಾರಣಳಾದೆ.

**ಪಾತು**— (ಕುಳಿತುಕೊಂಡು) ಯಾರು **ಕಾರಣವೋ** ಹೇಳೋದು ಸಾಧ್ಯವಿಲ್ಲ. ಅಂತೂ ಕೋರ್ಟಿನಲ್ಲಿ ಇವತ್ತು ಏನು ತೀರ್ಮಾನವಾಗುತ್ತೋ ತಿಳಿದರೆ, ಅಪ್ಪನಿಗೆ ನಮ್ಮ ವಿಚಾರದಲ್ಲಿ ಎಷ್ಟು ಕೋಪ ಬಿಂದಿದೇ ಅನ್ನೋದು ಗೊತ್ತಾಗುತ್ತೆ.

**ಸುಬ್ಬ**— ಇಷ್ಟೆಲ್ಲಾ ಆದರೂನೂ ಅವರು ಪ್ರೇತವಾಗಿದಾರೆ ಅನ್ನೋ ಮಾತಂತೂ ದೂರ ದೂರದ ಊರಿಗೆಲ್ಲಾ ಹರಡತಾನೇ ಹೋಗುತಾ ಇದೇ. ಅದನ್ನ ಕೇಳಿದಷ್ಟೂ ನನ್ನ ಕರುಳು ಬೆಂದುಹೋಗುತ್ತೆ.

**ಪಾತು**— ನನಗೆ ಸರಿಯಾದ ಅವಕಾಶ ಸಿಕ್ಕಿ, ಜೀವಕೊಡೋ ಅಂಥೋರ ಸಹಾಯ ದೊರೆತರೆ ಆ ಪ್ರೇತ ಯಾರೂನ್ನೋದನ್ನ ಪತ್ತೆಮಾಡಿ ಈ ಹಾಳು ಜನಗಳಿಗೆಲ್ಲಾ ತೋರಿಸುತಾ ಇದ್ದೆ.

[ಶಾಸ್ತ್ರಿ ಪ್ರವೇಶ. ಮುಖದಲ್ಲಿ ಆತುರ]

**ಸುಬ್ಬ**— ಬನ್ನಿ ಶಾಸ್ತ್ರಿಗಳೇ! ಕೂತುಕೊಳ್ಳಿ.

**ಶಾಸ್ತ್ರಿ**— (ಕೂಡುತ್ತಾ) ಕೋರ್ಟಿನಲ್ಲಿ ಇನ್ನೂ ತೀರ್ಮಾನ ಹೇಳಿಲ್ಲ. ಇನ್ನೊಂದು ಅರ್ಧ ಗಂಟೇಲಿ ಹೇಳಿಬಿಡುತಾರೆ. ಬಸವಯ್ಯನ್ನ ಶಾಮೂ ಹತ್ತಿರ ಕೂಡಿಸಿಬಂದೆ.

**ಸುಬ್ಬ**— ಇಷ್ಟು ಅವಸರದಲ್ಲಿ ಯಾಕೆ ಬಂದಿರಿ! ನೀವೂ ಅಲ್ಲೇ ಇದ್ದಿದ್ದರೆ ಒಂದು ಧೈರ್ಯ

**ಶಾಸ್ತ್ರಿ**— ನನ್ನ ಮನಸ್ಸಿಗೇನೋ ಒಂದು ಭಯ ತೋರಿತು. ತಿರುಗಿ ಬೇಗ ಹೊರಟುಹೋಗೋಣಾಂತ ಬಂದೆ. (ಪಾತುಕಡೆ ತಿರುಗಿ) ಅಮ್ಮಾ ಪಾತಮ್ಮ— ನೀನು ಹಠಮಾಡದೆ ಆ ಉಂಗುರಾನ ಒಂದು ಡಬ್ಬೀಲಿ ಹಾಕಿ ಕೊಟ್ಟುಬಿಡು. ನಾನು ಅದನ್ನ ಈ ಮನೆಯಿಂದ ಸಾಗಿಸಿಬಿಡುತೇನೆ. ಒಂದ ನಿಷ್ಟತೊಲದಹಾಗೆ. ಕೇಸು ಶಾಮಣ್ಣನಿಗೆ ಅಷ್ಟುಕ್ರೂರವಾವಾಗಿ ಆಗಲಾರದು. ಖಂಡಿತ ಅಂಥಾ ಪದಾರ್ಥ—ಅಮಂಗಳವಸ್ತು ಮನೇಲಿರಬಾರದಮ್ಮ. ನನ್ನೀ ಮಾತನ್ನ ಸ್ವಲ್ಪ ನಡೆಸಿಕೊಡು

**ಪಾತು**— ನಿಮ್ಮಾ ಕುರುಡುಮಾತುಗಳು ನನಗೆ ಅರ್ಥವಾಗೋದಿಲ್ಲ. ಪ್ರೇತದ ಬೆರಳಿನಲ್ಲಿ ಉಂಗರಾ ಇರುತ್ತೇಂದರೆ ಅದನ್ನ ನಂಬೋ ನಿಮ್ಮ

ಬುದ್ಧಿಗೆ ಈ ಪ್ರಪಂಚದಲ್ಲಿ ಜಾಗವಿಲ್ಲ  ಒಂದುವೇಳೆ ಅದು ನೀವು ಹೇಳೋ ಹಾಗೆ ನಮ್ಮ ತಂದೇ ಪ್ರೇತವಾದರೆ, ತಂದೆ ಮಗಳ ವಿಚಾರದಲ್ಲಿ ಅಷ್ಟು ಹೀನ ವಾಗಿನಡೆದುಕೊಳ್ಳುತಾನೆಯೇ ?

**ಶಾಸ್ತ್ರಿ**— ಪ್ರೇತಕ್ಕೆ ಪೂರ್ವಾಪರ ಜ್ಞಾನವಿರುತ್ತೇನಮ್ಮಾ!

**ಸುಬ್ಬ**— ಅಯ್ಯೋ ಶಾಸ್ತ್ರಿಗಳೇ! ನೀವೂ ಈ ಹಾಳು ಕೂಗನ್ನೇ ನಂಬು ತೀರಾ ?

**ಶಾಸ್ತ್ರಿ**— ತಪ್ಪಾಯಿತಮ್ಮಾ, ನಾನು ಹಾಗೆ ಹೇಳಲಿಲ್ಲ  ಆ ಉಂಗರ ನೋಡಿದರೆ ಭಯವಾಗುತ್ತೆ  ಅದರ ವಿಚಾರ ಕೇಳಿದಮೇಲಂತೂ ನನ್ನ ಭಯ ಅತಿ ಹೆಚ್ಚಿದೆ ...ಪಾತಮ್ಮ! ಇನ್ನೊಂದು ಸಲ ಕೇಳಿಕೋತೇನೆ, ನನಗೆ ನಿನ್ನ ಸಂಗಡ ಚರ್ಚೆ ಮಾಡೋದಕ್ಕೆ ಶಕ್ತಿ ಸಾಲದು—

**ಪಾತು**—ಹಾಗಾದರೆ ನಾನು ಹೇಳಿದ್ದಕ್ಕೆ ಒಪ್ಪಿಕೊಳ್ಳಿ.

**ಶಾಸ್ತ್ರಿ**— ಹಾಗಲ್ಲಮ್ಮ! ಆ ಉಂಗರ ಮನೇಬಿಟ್ಟು ತೊಲಗಿದರೆ ...

**ಪಾತು**— ಏನಾದರೂ ನಾನದನ್ನ ಹೊರಕ್ಕೆ ತೆಗಿಯೋದಿಲ್ಲ. ಬಂದ ಕಷ್ಟವೆಲ್ಲಾ ಬರಲಿ; ಅದರ ಮಾಲೀಕನ್ಯಾರೋ ಅದನ್ನ ಪತ್ತೆ ಮಾಡೇ ಮಾಡುತೇನೆ; ಅದರ ವಿಚಾರ ಕೊನೆಮುಟ್ಟಸಿಯೇ ತೀರುತೇನೆ

**ಸುಬ್ಬ**— ಪಾತು ! ಅದರ ಮಾಲಿಕನ್ಯಾರೋ ಏನೋ, ಅದನ್ನೆಲ್ಲಾ ಪತ್ತೆ ತದೂದು ನಡೆಸುತಾ ಕೂತುಕೊಳ್ಳೋಕೆ ನಮ್ಮ ಕೈಲಾಗುತ್ತೆಯೇ! ಅದನ್ನ ಕೊಟ್ಟುಬಿಡಮ್ಮಾ!

**ಪಾತು**—ನಾನು ಆ ಉಂಗುರಾನ ಈಚೆಗೆ ತೆಗೆಯೊಲ್ಲ! ಆದದ್ದೆಲ್ಲಾ ಆಗಲಿ, ಕೊನೇವರೆಗೂ ಶೋಧಿಸಿಯೇ ಬಿಡುತೇನೆ

**ಶಾಸ್ತ್ರಿ**— ನೀನಿಷ್ಟು ಹಠ ತೊಟ್ಟರೆ ನಾನೇನು ಮಾಡಲಿ. ಅದು ಮನೇ ಲಿದ್ದರೆ ಯಾರಾದರೂ ಕಾಹಿಲೆ ಬೀಳುತಲೇ ಇರುತಾರಂತೆ. ಅದನ್ನ ದಾಟ ಪೋರಿಗೆ ಆಯುಸ್ಸು ಕ್ಷಯಿಸುತ್ತಂತೆ. ಅದನ್ನ ತೆಗೆದು ಬಿಸಾಟರೆ ಕಣ್ಣುಗುಡ್ಡೆ ಸಿಡಿದುಹೋಗುತ್ತಂತೆ.

**ಪಾತು**- ನಿಮ್ಮ ಕುರುಡು ನಂಬಿಕೆಗಳಿಗೆ ಕೊನೆಮೊದಲೇ ಇಲ್ಲ ಖಂಡಿತ ನಾನು ಅದನ್ನ ಕೊಡೋದಿಲ್ಲ—ಅದರಿಂದ ಏನಾದರೂ ಸರಿ.

**ಶಾಸ್ತ್ರಿ**—(ನಿರಾಶೆ) ಹಾಗಾದರೆ ನಿನ್ನಿಷ್ಟ, ನಾನು ಕೋರ್ಟಿನಬಳಿಗಾದರೂ ಹೋಗುತೇನೆ.

[ಬಸವಯ್ಯನು ಗಾಬರಿಯಿಂದೋಡಿಬರುವನು]

**ಶಾಸ್ತ್ರಿ**—ಏನು ಬಸವಯ್ಯ ಸಮಾಚಾರ—?

**ಬಸವ**—(ಎಲ್ಲರನ್ನೂ ನೋಡಿ) ಕೋರ್ಟಿನಾಗೆ ತೀರ್ಮಾನ ಏಳಿದರು

**ಪಾತು**— ಮತ್ತು **ಸುಬ್ಬ**—ಏನಾಯಿತು ಬೇಗ ಹೇಳು ಬಸವಯ್ಯ!

**ಬಸವ**—(ದುಃಖದಿಂದ) ಈ ನಾಲಿಗ್ಯಾಗೆ ಎಂಗೇಳಲರವ್ವ !

**ಶಾಸ್ತ್ರಿ**—ಹೇಳು ಬಸವ, ಸುದ್ದಿ ಬೇಗ ಹೇಳೊ.

**ಬಸವ**—ರಾಯರ ಸಂಬಳದಾಗೆ ತಿಂಗಳಿಗೆ ಅತ್ತು ರೂಪಾಯಿನಂಗೆ ಇಡಿದು ಸೆಟ್ಟಿಗೆ ಕೊಡೋ ಆಗೆ ಅಪ್ಪಣೆ ಮಾಡಿದರವ್ವ.

**ಸುಬ್ಬ**—ಅಯ್ಯೋ ! ಆ ಕೋರ್ಟಿನಲ್ಲಿ ಧರ್ಮಕರ್ಮ ಕೇಳೋರೆ ಇಲ್ಲವೇ ? ಹತ್ತುರೂಪಾಯಿ ಕೊಟ್ಟು ಏನು ತಿನ್ನಬೇಕಂತೆ! ಶಾಮೂನ ಇನ್ನೂ ಕೋರ್ಟಿನಲ್ಲೇ ನಿಲ್ಲಿಸಿ ಕೊಂಡಿದಾರೆಯೆ ?

**ಬಸವ**—ಇಲ್ಲರವ್ವ

**ಸುಬ್ಬ**—ಹಾಗಾದರೆ ಬರುತಾ ಇದಾನೆಯೇ! ಅವನಿಗೆ ಈ ಹಾಳು ಮುಖ ಹೇಗೆ ತೋರಿಸಲಿ—(ಕಣ್ಣೊರಸಿಕೊಳ್ಳುವಳು)

**ಬಸವ**—ಬರುತಾ ಇಲ್ಲರವ್ವ

**ಶಾಸ್ತ್ರಿ**—ಹಾಗಂದರೇನಯ್ಯ ?

**ಬಸವ**—ಜಡ್ಜಿಗೋಳು ತೀರ್ಮಾನ ಏಳೋವಾಗ ನಾನು ಅವರಿಂದೇನೇ ನಿಂತಿದ್ದೆ. ಅವರೋದಿದ್ದನ್ನ ಕೇಳುತಾ ಕೇಳುತಾ ಬೆಂಚಿಂದ ಅಾಗೇ ಉರುಳಿಬಿಟ್ಟರು.

**ಸುಬ್ಬ**—ಅಯ್ಯೋ ! (ಬಿಕ್ಕುವಳು)

**ಪಾತು**—(ಕಾತರಳಾಗಿ) ಆಮೇಲೆ ?

**ಬಸವ**—ಅಲ್ಲಿಂದ ನೀರ್ತಂದು ನೆತ್ತಿಗೆ ತಟ್ಟಿ, ಗಾಡಿ ಮಾಡಿ ಆಸ್ಪತ್ರೇಗೆ ಕಳುಹಿಸಿದರು.

**ಸುಬ್ಬ**—ಅಯ್ಯೋ ! ನನ್ನ ಕಂದಾ !

**ಬಸವ**— ಅಲ್ಲಿಗೆ ಓದರ್ಮೇಲೆ ಅತ್ತು ನಿಮಿಸಕ್ಕೆ ಕಣ್ಣುಬಿಟ್ಟು ನೋಡಿ 'ಅಮ್ಮಾ! ಪಾತು!" ಅಂದ್ರು. ಡಾಕ್ಟರು "ನಾಳೇಗಂಟ ಇಲ್ಲೇ ಇರಲಿ. ಕಳ್ಳು ಎದೆ ಬತ್ತಿಬಂದೈತೆ ಸುದಾರಣೆ ಆಗಬೇಕೂ"ಂದ್ರವ್ವ. ಅಲ್ಲಿಂದ ಓಡಿಬಾಡೆ.

**ಸುಬ್ಬ**— ನಾಲ್ಕು ದಿನವಾಯಿತು, ಬಾಯಿಗೊಂದು ತೊಟ್ಟು ಗಂಜಿ ಹೋಗಿ; ನಾನೇ ನನ್ನ ಮಗೂಕಾಲಿಗೆ ಸಂಕೋಲೆಯಾದೆ!

**ಶಾಸ್ತ್ರಿ**— ಕಣ್ಣು ಬಿಟ್ಟು ಮಾತನಾಡುತಿದ್ದರೇನಯ್ಯ ನೀಬಂದಾಗ ?

**ಬಸವ**— ಔದು ಬುದ್ದೀ! ಆಲು ಕೊಟ್ಟಿದ್ದರು, ಅದನ್ನ ಕುಡಿಸುತಾ ಇದ್ದಳು ಒಬ್ಬಳು ನರ್ಸಮ್ಮ ರಾಯರು ಅವ್ವಾವರನ್ನೂ ಪಾತವ್ವ ಅವರನ್ನೂ ನೋಡಬೇಕೂಂದ್ರು.

**ಪಾತು**— ನಡಿಯಮ್ಮ! ನಾವು ಆಸ್ಪತ್ರೆಗೆ ಹೋಗೋಣ. ಬಸವಯ್ಯ, ನಿಂಗಮ್ಮ, ನೀವು ಇಲ್ಲಿರಿ ನಾವು ಆಸ್ಪತ್ರೇಗೆ ಹೋಗಿ ಶಾಮಣ್ಣನ ಕರ ಕೊಂಡು ಬರ್ತೀವಿ.

**ಬಸವ**—ಆಗಲಿ ತಾಯಿ

[ಶಾಸ್ತ್ರಿ, ಸುಬ್ಬಮ್ಮ, ಪಾತಮ್ಮ ನಿಷ್ಕ್ರಮಣ]

**ಬಸವ**— (ಕೂತುಕೊಳ್ಳುತ್ತಾ ಚೀಲದಿಂದ ಅಡಕೆಲೆ ತೆಗೆದು ಅಗಿಯುತ್ತಾ) ನಿಂಗೀ! ಇಟ್ಕಂಡು ಎಳ್ಡು ದಿನವಾದ್ದೋ. ಆಸೀ ತಡೀಲಾರೆ ಕಣೆ.

**ನಿಂಗಿ**— ನಾಳೇನೆ ಫಸ್ಟ್ ತಾರೀಕು. ಸಂಬಳ ಬರಬೋದು. ಸಂಜೆ ಕಡ ರಾಗಿ ತಂದು ಒಟ್ಟೇತುಂಬ ತಿನ್ನಾನಿ. ಸದ್ಯ ನೀವು ಬಸಿ ದೊಡ್ಡಮನಸ್ಸು ಮಾಡಿ ಸಾಲದಯೋಚನೆ ಮಾಡಲಿಲ್ಲವಲ್ಲ. ನನ್ನ ಪುಣ್ಯ.

**ಬಸವ**—ಇಷ್ಟೆಲ್ಲಾ ಕಂಡೂವಾ ?—ಹುಂ—ಎಲ್ಲಿ; ವಸಿ ಕಡ್ಡಿಪುಡಿ ಕೊಡು--

[ಅಡಕೆಲೆ ಅಗಿಯುತ್ತಾ ಕೂಡುವರು.]

## ಅಂಕ ೨—ದೃಶ್ಯ ೧

[ಆಸ್ಪತ್ರೆ ಕಟ್ಟೆಯ ಪಕ್ಕ. ರಂಗನಾಥರಾಯನು ನಿಂತು ಯೋಚಿಸುತ್ತಿರುವನು.]

**ರಂಗ**—ನನ್ನ ದುರಾಶೆಯಿಂದ ನನ್ನ ಅಮೂಲ್ಯ ತಿಲಸ್ಮಾತಿ ಕಳೆ

ಕೊಂಡೆ ಅಂದಿನಿಂದ ನನ್ನ ಬಿಸಿನೆಸ್ಸೇ ಬಿದ್ದುಹೋಯಿತು ಮೈನಲ್ಲಿ ಲವ ಲವಿಕೆ ಕಡಿಮೆ ಆಯಿತು. ನನ್ನ ಹಣಾನೆಲ್ಲ ಸೆಟ್ಟಿಯಿಂದ ತಗೊಂಡು, ಬೆಂಗಳೂರಿನಲ್ಲೇ ನೆಲೆಸಿಬಿಡಬೇಕು ಕಂಪೆನಿಯ ಹೆಡ್ಡಾಫೀಸಿಗೆ ಬರೆದು ನನ್ನೇಜನ್ಸಿ ಬೆಂಗಳೂರು ಡಿಸ್ಟ್ರಿಕ್ಟಿನಲ್ಲೂ ಚಲಾಯಿಸೋಹಾಗೆ ಮಾಡಿಕೋಬೇಕು. ಅಲ್ಲಿ ಪಕ್ಕ ಬಿಸಿನೆಸ್ಸು ನಡೆಯಿಸಿ, ಬಿಟ್ಟು ನಾಲ್ಕಾರು ವರ್ಷಗಳಲ್ಲೇ ಒಂದು ನಾಲ್ಕು ಜೊತೆ ಜೋಡೀಗ್ರಾಮ ತೆಗೆದು ಹಾಕಿಬಿಡಬೇಕು ಅವಳು ತವರುಮನೇಯಿಂದ ಬರೋವೇಳೆಗೆ ಮನ್ನಾಲಾಲರ ಹತ್ತಿರ ಒಳ್ಳೇ ಔಷಧಿ ತಗೊಂಡು ಮೈ ನೆಟ್ಟಗೆ ಮಾಡಿಕೋಬೇಕು.

[ನಂಜಯ್ಯನು ಖಿನ್ನಮುಖಿಯಾಗಿ ಪ್ರವೇಶಿಸುವನು]

**ರಂಗ**— ಯಾಕೆ ನಂಜಯ್ಯಾ ಮಂಕಾಗಿದ್ದೀಯಾ ?

**ನಂಜ**— ನನ್ನೆಂಡರಿಗೆ ಕಾಯಿಲೆ ಜಾಸ್ತಿಯಾಗೈತೆ ಬುದ್ಧಿ !

**ರಂಗ**— ಅದು ಯಾವಾಗಲಿಂದ ?

**ನಂಜ**— ಮಧ್ಯಾನ್ನದಿಂದ ಬುದ್ಧೀ

**ರಂಗ**— ಔಷಧಿ ಯಾರು ಕೊಡುತಾ ಇದಾರೆ ?

**ನಂಜ**— ನಮ್ಮ ಪಂಡಿತರು ಸೇಸಪ್ಪನೋರು.

**ರಂಗ**— ಅವರಿಗೇನು ಬರತ್ತೋ ?

**ನಂಜ**— ಅವರೊಬ್ಬರೇ ಬುದ್ದೀ ಈ ವೂರಾಗೆಲ್ಲಾ ನಮ್ಮಂತ ಗರೀಬರಿಗೆ ಮುಫತ್ತು ಔಷಧಿ ಕೊಡೋರು

**ರಂಗ**— ಬಿಟ್ಟೆ ಔಷಧಿ ಸಿಗುತ್ತೇಂತ ವಿಷ ತಗೊಳ್ಳೋದೇನಯ್ಯಾ ?

**ನಂಜ**— ಏನೋ ಒಳ್ಳೇ ಮನಸ್ಸಿಂದ ಕೊಡುತಾ ಅವರೆ. ದೇವರ ದಯ ಇದ್ದರೆ ಇಸಾನೇ ಅಮೃತ ಆದೀತು

**ರಂಗ**— ಯಾಕೋ ನಿನಗೂ ಆ ಬಸವಯ್ಯನ ಮಂಕು ಮುಚ್ಚಿಕೊಂಡ ಹಾಗಿದೆಯಲ್ಲೋ ! ಅಲ್ಲವೋ .......

**ನಂಜ**— ನಿಮ್ಮ ಗಾಸ್ ಲೈಟನಂತ ಬುದ್ದೀಗಿಂತ ಬಸವಯ್ಯನ ಮಂಕು ಆಣತೇನೇ ಮ್ಯಾಲು ಬಿಡಿ ದೇವರಾ

**ರಂಗ**— ಅಂದರೆ ?

**ನಂಜ**—ಅಂದರೆ ಅದು ಯಾರ ಕಣ್ಣೂ ಚುಚ್ಚಾಕಿಲ್ಲ ಅಂತ ಬುದ್ದೀ! ಶಾಮಣ್ಣೋರ ಮನೇಕಡೆ ಓಗಿದ್ದರಾ! . .. ಹಂ—ಈಗ ಯಾಕೆ ಓದೀರಿ; ಅಲ್ಲಿ ನಿಮ್ಮ ಬ್ಯಾಳೆ ಬೆಂದಾಯ್ತು; ಅಲ್ಲದೆ ಪಾತವ್ವ ಊರಾಗಿಲ್ಲ ಮನ್ಯಾಗ ತಿನ್ನಕೆ ಮುಗ್ಗಟ್ಟಾಗಿ, ಸುಬ್ಬವ್ವನ್ನೂ ಲಿಂಗೀನೂ ಕರಕೊಂಡು, ಅಳ್ಳೀಗೋಗಿ ಬಿಟ್ಟವರೆ.

**ರಂಗ**—(ಚಿಂತಾಕ್ರಾಂತನಾಗುವನು.)

**ನಂಜ**—ಯಾಕೆ ಬುದ್ದೀ ನಿಮಗೆ ಯಸನ?

**ರಂಗ**—(ಎಚ್ಚರಹೊಂದಿ) ಅಹಂ-ವ್ಯಸನವೇನು? "ಆ ಹುಡುಗಿ ಪ್ರೀತ ದುಂಗುರ ತಗೊಂಡ್ಹೋಗಿದೆಯಲ್ಲಾ ಜೊತೇಲಿ. ಇನ್ನು ಅದರಿಂದ ಆ ಸಂಸಾ ರಕ್ಕೆ ಏನೇನನಿಷ್ಟ ಸಂಭವಿಸುತ್ತೋ"ಂತ ಯೋಚಿಸುತಿದ್ದೆ.

**ನಂಜ**—ಬುದ್ದೀ! ಆ ಪಿರೇತಾನೆ ಬಂದು ಕೇಳೋವರೆಗೂ ಆ ಉಂಗು ರಾನ ಈಚೆಗೆ ತೆಗಿಯಾಕಿಲ್ಲಾಂತ ಆಣೆ ಮಡೀಕೊಂಡವರಂತೆ ಬುದ್ದೀ ಅವರು

**ರಂಗ**—(ಹುಸಿನಗೆ ನಗುತ್ತಾ) ಏನೋ?! ಪ್ರೀತಾನೇ ಬಂದು ಕೇಳೋದೇ!

**ನಂಜ**—ನಾ ಬತ್ತೀನೀ ಬುದ್ದೀ, ದ್ಯಾವರ ದರ್ಶನ ಮಾಡಿಕೊಂಡು ಪರ್ಸಾದ ತಗೊಂಡೋಗಬೇಕು ನನ್ನೆಂಡರಿಗೆ. ಅಂಗೇ ಪಂಡಿತರನ್ನ ನೋಡಿ ಕೊಂಡು.

**ರಂಗ**—ಇದೇನಯ್ಯ ದೇವರಮೇಲಿಷ್ಟೊಂದು ಭಕ್ತಿ?

**ನಂಜ**—ಏನೂ ಇಲ್ಲ. ನಾನು ಯೆಂಕಟರಮಣಸ್ವಾಮಿ ಒಕ್ಕಲು, ಇದು ಇಸ್ಪೇಸ್ಪರ. ಇಂದೆ—ನಿಮ್ಮ ಗುಲಾಮನಾಗಿದ್ದ ಕಾಲ್ದಾಗೆ, ಈ ದ್ಯಾವರವ್ಯಾಗೆ ಆಣೆ ಮಡಗಿ, ಸುಳ್ಳೇಳಿ ನನ್ನಾಲ್ಗೇಗೆ ಉಳ ಸುರಿಸಿಕೊಂಡಿದ್ದೆ. ಆ ಪಾಪ ತೊಡಿಯಾಕೆ ದಿನಾ ಈ ನಮ್ಮಪ್ಪನ ಸೇವೆ ಮಾಡುತೀನೀಂತಅರಕೆ ಒತ್ತಿದೀನಿ

**ರಂಗ**—ಯಾಕೋ? ನಿನಗೂ ಬಸವಯ್ಯನ ಗಾಳಿ ಬೀಸಿದಹಾಗಿದೆ

**ನಂಜ**—ಆ ಪುಣ್ಯ ಎಲ್ಲಿಂದ ಬಾತು ಬುದ್ದೀ! ಉಾಡಮನೇ ಗಂಟು ಕದ್ದು, ಅದನ್ನುಳಿಸಿಕೊಳ್ಳೋಕೆ ಎಂಡರ ಕೊಳ್ಳಾಗಿನ ಮಾಂಗಳಸೂತ್ರ ಮಾರಿ, ಕಡೇಗೆ ಅದನ್ನೂ ದಕ್ಕಿಸಿಕೂಳ್ಳಲಾರದೆ ಕಂಡೋರ ಬಾಯಿಗಾಕಿ, ಸತ್ತು

ಸಾಪಿಗೇಪುರ ಆಗಿರೋ ದರ್ಮರಾಯನಂಥ ದಣೀ ಎಸರಿಗೆ ಇಸ ಮಡಗಿ, ಅದನ್ನ ಊರಾಗೆಲ್ಲಾ ಸಾರಿ, ಊವಿನಂತ ಅವ್ವ-ಮುತ್ತಿನಂತ ಮಗ ಆವರ ಒಟ್ಟೀ ಉರಿಸಿ, ಪತರಗುಟ್ಟ್ತಾ ಇರೋ ಪಾಪಿ ಚಂಡಾಲಾ ನಾನೆಲ್ಲೀ! ದೇವ ರಂಥ ಮನಸ ಆ ಬಸವಯ್ಯ ಎಲ್ಲಿ! ಅಂತಾವರೆಸರೆತ್ತಾಕೆ ಕೂಡ ಯೋಗ್ಯತೆ ಇಲ್ಲ ಬುದ್ಧೀ ನಮ್ಮಂತಾವರ್ಗೆ. ಅವನಿಂದೇನೆ ಏಳಿದ್ದ—ನಮ್ಮಂತಾವರಿಗೆ ಜೂಟಾಪಾರಿ ಒಂಟಾಕಿಲ್ಲ, ಅದು ಓದ್ದೋರು ಬರೆದೋರಿಗೇ ಚೆಂದಾಂತ. ಈಗದು ನಿಜಾಂತ ಕಾಣಿಸುತ್ತೈತೆ

**ರಂಗ**— ನಂಜಾ! ನೀನು ಯಾರಮುಂದೆ ನಿಂತು ಮಾತನಾಡ್ತಾ ಇದೀ ಅನ್ನೋದು ಗೊತ್ತೋ?

**ನಂಜ**— ನಂಗೆಲ್ಲಾ ಗೊತ್ತು ಬಿಡೀಬುದ್ಧೀ. ಕಾಡೋರಗಂಟಿಗಾಸೇ ಬಿದ್ದು, ಅವರತಲೆ ಗೋರ್ಲಮಾಡಿ, ಪತ್ರ ಅಬೇಸ್ ಮಾಡಿ, ಸುಳ್ಳುರುಜೂ ಮಾಡಿಸಿಕೊಂಡು, ಆ ಗಂಟು ನುಂಗಿ, ತಿರುಗಿ ಆ ಮನೇಗೆ ಓಗಿ, ಅವರತಲೇ ಸವರಿ, ಸಾಲ ಕೊಡಿಸಿ, ಮನೇ ಮುಣುಗ್ಸಿ, ಒಟ್ಟೆತುಂಬಿಕೊಳ್ಳೋರು ಯಾತರ ದೊಡ್ಡ ಮನಸರೂ!

**ರಂಗ**— ನಂಜಾ! (ರೇಗಿ ಹಲ್ಲು ಕಡಿಯುವನು)

**ನಂಜ**— ನನ್ನಿಂಡರ ಕಾಯಿಲೇ ವಾಸಿಮಾಡಕೀನೀಂತ ಪೂಜೆನೆಪ ಮಾಡಿ ಮಡಗಿ ಇಪ್ಪತ್ತೈದು ರೂಪಾಯಿ ಕಸುಗೊಂಡು ಮೋಸಮಾಡಿ ಒಟ್ಟೇ ಒರಕೊಳ್ಳೋರು ಯಾತರ ದೊಡ್ಡಮನಸರು!

**ರಂಗ**— ಅಲ್ಲವೋ! ಲೋ! ನಿನ್ನ ಮನೇಮುಂದೆ ಸುಳಿದಾಡುತಿದ್ದ ಪ್ರೇತದ ತಡೆಗಟ್ಟೋಕೇಂತ ಪೂಜೆ ಹಾಕಿಸಿದೇನೋ, ಇಲ್ಲ ನಿನ್ಹೆಂಡರ ಖಾಯಿಲೆ ವಾಸಿಮಾಡ್ತೀನೀಂತ ದುಡ್ಡಿಸಿಕೊಂಡೆನೋ? ಪೂಜೆ ಹಾಕಿ ಬಂಧಿಸಿದ ದಿನದಿಂದ ಆ ಗ್ರಹದ ಸುಳಿವಾದರೂ ಇದೆಯೇ ನಿನ್ನ ಬೀದೀಲಿ?

**ನಂಜ**— ಸುಳಿದಿದ್ದರೆ ನಮ್ಮ ಗಲ್ಲಿ ಗಂಡುಗಳನೆಲ್ಲಾ ಬಿಟ್ಟು, ಮೂಳೆ ನೆಗ್ಗಿಸಿಬಿಡುತಿದ್ದೆ. ನಾನೇ ಕೈಯಾರ ಬಿಟ್ಟಂಗಾಯಿತು ಆ ಗರಾವ.

**ರಂಗ**— (ಬೆಚ್ಚುವನು. ಕೋಪವನ್ನು ನುಂಗಿ) ನೋಡು ನಂಜಯ್ಯಾ! ನಿನ್ನ ಮನಸ್ಸು ಬಹಳ ನೊಂದಿದೆ, ಈಗ ನೀನೇನಂದರೂ ನನಗೆ ಕೋಪವಿಲ್ಲ.

ಆಂ....ನಿನ್ನ ಹೆಂಡತೀನ ಕರಕೊಂಡೋಗಿ ನನ್ನ ಸ್ನೇಹಿತರು ಡಾಕ್ಟರ್ ಭೂರ್ಷಣಗಾದರೂ ತೋರಿಸೋ !

**ನಂಜ**— ನಿಮ್ಮ ಡಾಕ್ಟರ್ ಭೂರ್ಷಣ ಗೀರ್ಷಣ ಎಲ್ಲಾ ಕಾಸಿನ ಕಾಲಿಷಿ ಯೋರು ಬುದ್ದೀ ; ಮನಸನ ಕೈ ಇಡಿಯೋರಲ್ಲ, ನಮ್ಮಪ್ಪ ದೇವರವನೆ— ಬತ್ತೀನಿ ಬುದ್ದೀ.

**ರಂಗ**— ದೇವರೆಲ್ಲಿದಾನೋ ನಿನ್ನ ಗೋಳು ಕೇಳೋಕೆ ?

**ನಂಜ**— ಇಸ ಮಡಿಕ್ಕೊಂಡು ಎದುರೆಗಿರೋ ನಮನಸರಿಗಿಂತ ಎಲ್ಲೂ ಇಲ್ಲದಿರೋ ದ್ಯಾವರೇ ಮೇಲು—ನಾನು ಬತ್ತೀನಿ ಬುದ್ದೀ.

**ರಂಗ**— ನಂಜಾ ! ನಿನ್ನ ಮೂಡಭಕ್ತೀಲಿ ಪಾಪ ಆ ನಿನ್ನ ಹೆಂಡತಿ ಪ್ರಾಣ ಹೋಗೋದುಕೂಡ ನೋಡೋದಿಲ್ಲವಲ್ಲೋ !

**ನಂಜ**— (ರೇಗಿ, ಎದೆ ಬಡಿದುಕೊಂಡು) ಆಹಾ! ಬುದ್ದಿ! ನನ್ನ ಕುಟುಂಬದ ಇಚಾರ್ದಾಗೆ ನಿಮ್ಮ ಕಣ್ಣಾಗೆ ನೀರು ಅರಿಯೋದು ನೋಡಿ ನನ್ನೊಟ್ಟೆ ಉರೀತೈತೆ ನನ್ನೊಡೆಯಾ— ನಾ ಬತ್ತೀನಿ—

**ರಂಗ**— ನಂಜಯ್ಯಾ! ನಿನ್ನ ಮನಸ್ಸು ಕೆಟ್ಟುಹೋಗಿದೆ ನೀನು ಏನಾದರೂ ನನಗೆ ಚಿಂತೆಯಿಲ್ಲ ಆದರೆ ನಿನ್ನ ಹೆಂಡತೀನ ಕರಕೊಂಡೋಗಿ ಡಾ|| ಭೂರ್ಷಣರಿಗೆ ತೋರಿಸಿ ಔಷದಿ ಕೊಡಿಸು. ಅವರಿಗೇನು ದುಡ್ಡು ಬೇಕಾದರೂ ನಾನು ಕೊಡುತೀನಿ.

**ನಂಜ**— ಶಾಮಣ್ಣೋರಿಗೆ ಕೊಟ್ಟಂಗೆ ತಾನೇ !

**ರಂಗ**— ಅಯ್ಯಾ! ನೀನು ಅದನ್ನ ಹಿಂತಿರುಗಿ ಕೊಡಬೇಡ, ನನಗೆ ನಿನ್ನಂಥಾವರ ಸ್ನೇಹ ಹೆಚ್ಚೇ ಹೊರತು, ಹಾಳು ದುಡ್ಡು ಹೆಚ್ಚಲ್ಲ ನಂಜಯ್ಯಾ!

**ನಂಜ**— ತಾವೇಳೋದೇನೋ ನಿಜ ಇರ್ಬೋದು, ಆದರೆ ತಪ್ಮ ಕೈವುಟ್ಟದ ದುಡ್ಡಿನಿಂದ ಕೊಡಿಸಿದ ಔಷದಿ ಇಸ ಆದೀತು— ನಾ ಬತ್ತೀನಿ ಬುದ್ದೀ— (ನಿಷ್ಕ್ರಮಿಸುವನು)

**ರಂಗ**— (ತಲೆಯಮೇಲೆ ಕೈಯಿಟ್ಟು ನಿಟ್ಟುಸಿರು ಬಿಡುತ್ತಾ) ಇದ್ದವನೊಬ್ಬ ನಂಬಿಕಸ್ಥನಾದ ಭೃತ್ಯ—ಸ್ನೇಹಿತ ಇಂದು ಅವನೂ ಪರಮ ಶತ್ರುವಾದ. ಅವನಾಡಿದ ಒಂದೊಂದು ಮರ್ಮಭೇದಕವಾದ ಮಾತೂ ಎದೆಯನ್ನಿ

ರೀತಾ ಇದೆ ಕೊನೆಗಾದರೂ ಅವನು ನನ್ನ ಹಿಡಿತಕ್ಕೆ ಸ್ವಲ್ಪ ಸಿಕ್ಕಿದ್ದರೆ ಜನ್ಮೇಪಿ ಅವನು ನನ್ನ ಸೇವೆಯನ್ನ **ಬಿಡದ**ಹಾಗೆ ಕಟ್ಟಿ ಹಾಕುತಿದ್ದೆ. ನನ್ನ ತಿಲಸ್ಮಾತಿಯು ನನ್ನ ಕೈಬಿಟ್ಟ ಘಳಿಗೆಯಲ್ಲೇ ನನ್ನ ಗುರುವೂ ಕೈಬಿಟ್ಟರು. ನನ್ನ ಗ್ರಹಗತಿಗಳು ಬಹು ಕ್ರೂರವಾಗಿರುವಂತೆ ತೋರುತ್ತದೆ ಅರ್ಜುನ ಸೆಟ್ಟಿಯ ಈಚಿನ ನಡವಳಿಕೆಗಳು ವಕ್ರವಾಗಿವೆ ನಾಳೆಯೇ ಅವನು ಬರೆದು ಕೊಟ್ಟಿರೋ ಪ್ರೋನೋಟುಗಳನೆಲ್ಲಾ ತೋರಿಸಿ ಒಪ್ಪಿಸಿಬಿಟ್ಟು, ನನ್ನ ಎಂಟೂವರೆ ಸಾವಿರ ರೂಪಾಯಿನೂ ತಗೊಂಡುಬಿಟ್ಟು, ಆದಷ್ಟು ಜಾಗ್ರತೆ ಈ ಸ್ಥಳವನ್ನು ಬಿಟ್ಟುಬಿಡಬೇಕು ಏನಾದರೂ ಮಾಡಿ ನನ್ನ ಗುರುವಿನ ಪವಿತ್ರ ದರ್ಶನವನ್ನು ಮಾಡಿಕೊಂಡು, ನನ್ನ ತಿಲಸ್ಮಾತಿಯನ್ನು ಮತ್ತೆ ಸಂಪಾದಿಸುವುದರಲ್ಲಿ ಜೀವದಾನೆಯಾದರೂ ಬಿಟ್ಟು ಪ್ರಯತ್ನಿಸಬೇಕು ಗುರುವೇ! ಅಧೀರವಾಗುತ್ತಿರುವ ನನ್ನ ಮನಸ್ಸಿಗೆ ಧೈರ್ಯವನ್ನು ದಯಪಾಲಿಸು.

## ಅಂಕ ೨ – ದೃಶ್ಯ ೨

[ಶಾಮಣ್ಣನ ಮನೆಯ ವಠಾರ— ಮುರುಕು ಮಂಚದ ಕಾಲಬಳಿ, ಬಸವಯ್ಯನು ಚಿಂತಾಕ್ರಾಂತನಾಗಿ ಕುಳಿತಿರುವನು.]

**ಬಸವ**—(ನಿಟ್ಟುಸಿರು ಬಿಟ್ಟು) ಈ ಮನೆ ಭಾಗ್ಯಲಕ್ಷ್ಮಿ ದಾಟೋದಂಗಾಯಿತು ದೊಡ್ಡ ರಾಯರು ಹಣೆಮಡಗಿ ಏಳೋಗಿದ್ದರು. ಅವರ ಮಾತೂ ಧೂಳಾಯಿತು ಅವರೇಳಿದಂಗೇ ಆಯಿತು ಈ ಮನೆ ಪಾಡು. ಶಾಮಣ್ಣೋರ ಕಷ್ಟ ನೋಡಲಾರದೇನೆ ಪಾತವ್ವ ಸುಬ್ಬವ್ವ ನಿಂಗೀನ ಕರಕೊಂಡು ಅಳ್ಳೀಗೋದರಲ್ಲ, ಅದರಿಂದೇನಾದ್ರೂ ಇವರೊಸಿ ಸಲೀಸಾಗಿ ಸಾಲಕ್ಕೆ ಕಟ್ಟಬವುದಾಗಿತ್ತೂಂದರೆ, ಬರಗಾಲದಾಗೆ ದಿಬ್ಬಣ ಬಂದಂಗೆ ಇಷ್ಟುದಿನ ಇಲ್ಲಡು ಈ ಮಾರಾಯ ಈಗಲೇ ಕಳಿಸಬೇಕಾ ಮಗಳ್ನ ಗಂಡನ ಮನೇಗೆ—ಈ ಮಾರಾಯಿತಿ ಎಂಗೋಂತಿದ್ದೆ—ಓಹೋ ದೇವಸ್ಥಾನದಿಂದ ಬಂದರೂಂತ ಕಾಣಿಸುತ್ತೈತೆ.

**ರತ್ನ**— (ಹೂವು, ಹಣ್ಣು, ಪಂಚಪಾಳಗಳಿಂದ ಕೂಡಿದ ತಟ್ಟೆ ಕೈಲಿ ಹಿಡಿದು ಪ್ರವೇಶಿಸಿ ಅದನ್ನ ಕೆಳಗಿಡುತ್ತಾ) ಇನ್ನೂ ಬಂದಿಲ್ಲವೇನೋ ಮನೆಗೆ?

**ಬಸವ**— ರಾಯರಿನ್ನಾ ಬಂದಿಲ್ಲರವ್ವ.

**ರತ್ನ**— ಬೆಳಿಗ್ಗೆ ಸಾಮಾನು ತರುತೀನೀಂತ ಹೋದೋರು ಇನ್ನೂ ಬರುತಾ ಇದಾರೆ ನಿಮ್ಮ ರಾಯರು.

**ಬಸವ**— ಸಂಜೇನಾಗ ಪೇಟೇಕಡೆ ಓಗುತಿದ್ದರವ್ವ ಸಾಮಾನಸಕ ಈಗ ತಂದೇ ತರುತಾರೆ

**ರತ್ನ**— ಬೇಡಾಂದಪ್ಪನ ಶ್ರಾದ್ಧಮಾಡಿ, ಹೆಂಡತಿ ಮನೇಗೆ ಬರೋವೇ. ಳಿಗೆ ಬರಿಗೈ ಆದರು ಏನೋ ನನ್ನ ಪೂಜೇಫಲ ಚೆನ್ನಾಗಿದ್ದರೆ, ಅವರಿಗೆ ಸರಿಯಾದ ಕೆಲಸ ಸಿಕ್ಕಿ. ಈ ಹಾಳು ಸಾಲ ಸೋಲ ಎಲ್ಲಾ ಹರಿದರೆ, ನಾವೂ ಒಂದೆರಡುದಿನ ನಿರಾತಂಕವಾಗಿ ಎರಡು ಹೊತ್ತೂ ಊಟ ಮಾಡಿಕೊಂಡಿರ ಬಹುದೇ ಹೊರತು, ಇಲ್ಲದಿದ್ದರೆ ಈ ಮನೇಲಿ ಬಾಳೋದು ಅಸಾಧ್ಯ.

**ಬಸವ**— ಅಂಗ್ಯಾಕಂದೀರವ್ವ! ಇದೇ ಮನ್ಯಾಗೆ ಇಂದೆ ಆಳು ಬಿದ್ದಿರೋ ತೊಟ್ಟೇಲಿ, ತಾಸಿಲ್ದಾರ್ರು ಕಿಟ್ಟಪ್ನೋರು-ನಮ್ಮ ದೊಡ್ಡಬುದ್ಧಿಯೋರು ಬದುಕಿದ್ದಾಗ ಒಂದು ದಿನ ಆಕಿದ ಅನ್ನದ ಖರ್ಚು ನಮ್ಮ ಸಂಸಾರಕೆ ಒಂದು ವರುಸವೆಲ್ಲಾ ಆದಾತು ಅಂತಾಮನೆ ತಾಯಿ ಇದು.

**ರತ್ನ**— ದೊಡ್ಡಮಾತು. ಈಗದನ್ನ ನೆನೆಸಿಕೊಂಡರೆ ಹೊಟ್ಟೆ ತುಂಬುತ್ತೇನು? ನಮ್ಮ ತಾತನೂ ಜೋಡೀದಾರರೂ, ನಮ್ಮಪ್ಪನ ಮದುವೇಲಿ ಬರೀ ವಾಲಗಕ್ಕೇನೇ ಮೂರು ಸಾವಿರ ರೂಪಾಯಿ ಖರ್ಚುಮಾಡಿದರಂತೆ. ಆದರೆ ನಾನು, ಅವರ ಮೊಮ್ಮಗಳು ಈಗ ಹೀಗೆ ಉಪವಾಸ ಇದೀನಿ— ಅದು ಸರೀ! ಶಾಸ್ತ್ರಿಗಳನ್ನ ಬರಹೇಳೂಂತ ಹೇಳಿದ್ದೆನಲ್ಲ ಎಷ್ಟು ಹೊತ್ತಿಗೆ ಬರ್ತೀನೀಂದ್ರು?

**ಬಸವ**— ಈಗ ಪೂಜೆ ಮುಗಿಸಿಕೊಂಡು ತಕ್ಷಣಾನೆ ಬತ್ತೀನೀಂತ ಏಳಿದರವ್ವ

**ರತ್ನ**— ಏನು ಪೂಜೆಯೋ; ಏನು ಕಥೆಯೋ—

**ಬಸವ**—(ಹೆಜ್ಜೆ ಸದ್ದು ಕೇಳಿ) ರಾಯರು ಬರೋ ಅಂಗೈತರವ್ವ
[ಇತ್ತಲಿಂದ ಶಂಕರಶಾಸ್ತ್ರಿಗಳು ಪ್ರವೇಶಿಸುವರು.]

**ರತ್ನ**—ನೂರು ವರ್ಷ ಶಾಸ್ತ್ರಿಗಳಿಗೆ. ನಿಮ್ಮನ್ನೇ ಇನ್ನೂ ಬರಲಿಲ್ಲ ವಲ್ಲಾಂತ ಬೈತಾ ಇದ್ದೆ.

**ಶಾಸ್ತ್ರಿ**—ಇದೇನಮ್ಮ ಇಷ್ಟೊಂದು ಅವಸರವಾಗಿ ಹೇಳಿಕಳುಹಿಸಿದ್ದು?

**ರತ್ನ**—ಏನೂ ಇಲ್ಲ ಬನ್ನಿ ಕೂತುಕೊಳ್ಳಿ. (ಮಂಚದಮೇಲೆ ಕೂಡು ವನು) ನಿಮ್ಮಲ್ಲಿ ಈಗ ಒಂದು ಬಹಳ ಮುಖ್ಯವಾದ ಗುಟ್ಟಾದ ವಿಚಾರ ತಿಳಿ ದುಕೊಳ್ಳಬೇಕಾಗಿದೆ

**ಶಾಸ್ತ್ರಿ**—ಅಗತ್ಯವಾಗಿ ಆಗಲಿ. ಅದೇನು ಹೇಳು.

**ರತ್ನ**—ನೀವು ನಾನು ಕೇಳೋ ಕೆಲವು ಪ್ರಶ್ನೆಗಳಿಗೆ ನೇರವಾದ ಜವಾ ಬುಗಳನ್ನ ಹೇಳಬೇಕು.

**ಶಾಸ್ತ್ರಿ**—ಅದೇನು ಕೇಳು ತಾಯೀ!

**ರತ್ನ**—ನೀವು ಆ ಪ್ರಶ್ನೆಗಳಿಗೆ ಈಗ ಯಾವ ಉತ್ತರ ಹೇಳುವಿರೋ ಮುಂದೂ, ಯಾವಾಗಲಾದರೂ ಸರಿಯೇ ಅದೇ ಉತ್ತರಗಳನ್ನ ಮರೆ ಮಾಚದೆ ಯಾರಮುಂದೆ ಬೇಕಾದರೂ ಹೇಳುತೀರಲ್ಲವೆ?

**ಶಾಸ್ತ್ರಿ**—ಇದೇನಮ್ಮ ಹೀಗೆ ಕೇಳುತೀ!.........ನಿನಗಿನ್ನೂ ನನ್ನ ಸ್ವಭಾವ ತಿಳೀದು. ಹೋಗಲಿ—ಅದೇನು ಕೇಳಬೇಕೋ ಕೇಳು.

**ರತ್ನ**—ನೀವು ಮನಸ್ಸಿಗೇನೂ ತಿಳುಕೋಬಾರದು.

**ಶಾಸ್ತ್ರಿ**—ಇಲ್ಲ ಹೇಳು ತಾಯೀ; ಸಂಕೋಚವಿಲ್ಲದೆ ಹೇಳು

**ರತ್ನ**—ಶಾಸ್ತ್ರಿಗಳೇ! (ನಿಧಾನಿಸಿ) ಈಗ ಹೆಂಗಸರು ಸಾಮಾನ್ಯವಾಗಿ, ತಮ್ಮ ಗಂಡಂದಿರ ಶ್ರೇಯೋಭಿವೃದ್ಧಿಗಾಗಿ ಮಾಡತಕ್ಕಂಥ ಹಬ್ಬಗಳು ಯಾವುವು?

**ಶಾಸ್ತ್ರಿ**—ಹಬ್ಬ ಅಲ್ಲ—"ವ್ರತಾ" ಅನ್ನೂ—

**ರತ್ನ**—ಹೂಂ—ವ್ರತ.

**ಶಾಸ್ತ್ರಿ**—ಗೌರೀವ್ರತ, ಸಾವಿತ್ರೀವ್ರತ, ಅರುಂಧತೀವ್ರತ.—

**ರತ್ನ**—ಸಾಕು ಸಾಕು .......ಈಗ ಗೌರೀಹಬ್ಬ ವರುಷಕ್ಕೆಷ್ಟುಸಲ ಬರುತ್ತೆ ?

**ಶಾಸ್ತ್ರಿ**—ಒಂದು ಸಲ

**ರತ್ನ** ಹೆಣ್ಣುಮಕ್ಕಳು ಅದನ್ನ ಮಾಡದೆ ಬಿಡಬಹುದೆ ?

**ಶಾಸ್ತ್ರಿ**—ಉಂಟೇ ! ಉಂಟೇ !

**ರತ್ನ** ಅಂದರೇನಂದಹಾಗಾಯಿತೂ—ವರುಷಕ್ಕೊಂದು ಗೌರಿಪೂಜೆ. ಇದರಲ್ಲಿ ಹೆಣ್ಣುಮಕ್ಕಳು ಗಂಡಂದಿರ ಶ್ರೇಯಸ್ಸಿಗೋಸ್ಕರ ಗೌರೀಪೂಜೆ ಮಾಡುತ್ತಾರೆ ಇಂಥಾ ಪೂಜೇನ ಮಾಡದೆ ಬಿಡಬಾರದೂಂತ, ಅಲ್ಲವೇ ?

**ಶಾಸ್ತ್ರಿ**—ಹೌದು-ಹೌದು !

**ರತ್ನ**—ಇದೇ ಮಾತನ್ನೇ ಮುಂದೆ ಅವಶ್ಯಕತೆ ಬಂದರೆ, ಹೀಗೆ ಮರೆ ಮಾಚದೆ ಹೇಳುತೀರಲ್ಲವೇ?

**ಶಾಸ್ತ್ರಿ**—ಹಾಗಂದ್ರೇನಮ್ಮ ! ಈ ಸತ್ಯದ ವಿಚಾರ ಹೇಳೋದಕ್ಕೆ ಮರೆ ಮಾಚಬೇಕೇ ?

**ರತ್ನ**—ಇಷ್ಟಕ್ಕೋಸ್ಕರ ಬರಹೇಳಿದೆ ಶಾಸ್ತ್ರಿಗಳೇ. ನನ್ನಿಂದ ನಿಮ ಗಷ್ಟ ತೊಂದರೆಯಾಯಿತೋ; ಅಪರೂಪಕ್ಕೆ ಬಂದಿರಿ; ಒಂದಿಷ್ಟು ಕಾಪಿ ಮಾಡಿಕೊಡೋಣಾಂದರೂ ಮನೇಲಿ ಒಂದುಚೂರು ಸಾಮಾನಿಲ್ಲ. ನಾನು ಕಾಲಿಟ್ಟ ವಿಷಗಳಿಗೆ. ಬೆಳೆಗೆದ್ದರೆ "ಅದಿಲ್ಲಾ ಇದಿಲ್ಲಾಂತ" ಕೊರಗೋದು; ದಿನ ಬೆಳಗಾದರೆ ಉಪವಾಸ ಮಾಡೋದು. ಇನ್ನೂ ಮುಂದೆ ಏನೇನು ಅನುಭವಿಸಬೇಕೋ !

**ಶಾಸ್ತ್ರಿ**—(ಸಮಾಧಾನ ಪಡಿಸುವ ಧ್ವನಿಯಲ್ಲಿ) ಅಮ್ಮಾ! ಸ್ಥಿತಿ ಹೀಗೇ ಇರೋದಿಲ್ಲ. ನಾಳೆ ದೇವರು ಕಣ್ಣುಬಿಟ್ಟುನೋಡಿ ಶಾಮಣ್ಣನಿಗೆ ಒಂದು ದೊಡ್ಡ ಕೆಲಸವಾದಮೇಲೆ, ನಿಮ್ಮ ಈ ಹೊತ್ತಿನ ಕಷ್ಟ ನಾಳೆಗೆ ಕನ ಸಾಗಿ ಕಾಣುತ್ತೆ ಅಂ, ನಾನಿನ್ನು ಹೊರಡಲೇ? ಆ ನಂಜಯ್ಯನ ಹೆಂಡತೀಗೆ ಮಂತ್ರ ಹಾಕೋದಕ್ಕೆ ಹೋಗಬೇಕು.

**ರತ್ನ**—ಆಗಲಿ ಶಾಸ್ತ್ರಿಗಳೇ.

**ಶಾಸ್ತ್ರಿ**—(ಎದ್ದು ಹೊರಡುತ್ತಾ) ಬರಲೇ ಬಸವಯ್ಯಾ ?

**ಬಸವ**— ನಮಸ್ಕಾರ ದೇವರೇ! (ನಮಸ್ಕರಿಸುವನು)

**ಶಾಸ್ತ್ರಿ**— ಧೀರ್ಘಾಯುಷ್ಮಾನ್ ಭವ (ನಿಷ್ಕ್ರಮಣ)

**ರತ್ನ**—ಶಾಸ್ತ್ರಿಗಳು ಹೇಳಿದ್ದನ್ನ ಕೇಳಿದೆಯೋನೋ ಬಸವಾ?

**ಬಸವ**— ಕೇಳಿದೆ ತಾಯೀ! ಆದರೆ ತಾವು ಯಾತಕ್ಕಿಂಗೆ ಕೇಳಿದ್ರೀಂ ಬೋದು ಅವರಿಗೇನು ಗೊತ್ತರವ್ವ!

**ರತ್ನ**— ಯಾತಕ್ಕೇನು ಕೇಳಿದ್ದು, ಏನೋ ತಿಳಿದೋನಿಗಿಂತ ಹೆಚ್ಚಾಗಿ ತಲೆಹರಟೆ ಹರಟುತಾನೆ—

[ಹೆಗಲಿನಮೇಲೆ ಗಂಟನ್ನು ಹೊತ್ತುಕೊಂಡು ಬಾಡಿದ ಮುಖದ ಶಾಮಣ್ಣನು ಪ್ರವೇಶಿಸುವನು ಬಸವಯ್ಯನು ಓಡಿಹೋಗಿ ಗಂಟನ್ನು ತೆಗದು ಕೊಳ್ಳಲು ಯತ್ನಿರುವನು]

**ಶಾಮು**— ಬಿಡು ಬಸವಯ್ಯಾ ಅಷ್ಟೇನೂ ಭಾರವಿಲ್ಲ.

(ಗಂಟನ್ನು ಕೆಳಗಿಟ್ಟು ಮಂಚದಮೇಲೆ ಕೂಡುವನು)

**ರತ್ನ**—(ಹತ್ತಿರ ಹೋಗಿ ಪ್ರೇಮದ ಧ್ವನಿಯಲ್ಲಿ) ಒಲೆ ಹೊತ್ತಿಸಲೇ?

**ಶಾಮು**— ಹೂಂ, ರತ್ನ, ಹೊತ್ತಿಸು! ನಾನೂ ಬಂದು ಸಹಾಯ ಮಾಡುತೀನಿ.

**ರತ್ನ**— ಬೇಡ, ನೀವು ಸುದಾರಿಸಿಕೊಳ್ಳಿ

(ಗಂಟನ್ನು ತೆಗೆದುಕೊಂಡು ಒಳಕ್ಕೆ ಹೋಗುವಳು.)

**ಶಾಮು**—(ಅವಳು ಹೋದಕಡೆಯೇ ನೋಡುತ್ತಾ) ಹಣವಂತರ ಮನೇಲಿ ಹುಟ್ಟಿ, ಸುಖವಾಗಿ ಬೆಳೆದ ಹುಡುಗಿ. ನನ್ನಂಥ ನಿರ್ಭಾಗ್ಯನ ಕೈ ಹಿಡಿದದ್ದಕ್ಕೆ ಬೆಳಗಿನಿಂದ ಉಪವಾಸವಿದೆ. ಆದರೂ ಮುಖದಮೇಲೆ ಕೋಪದ ನೆರಳು ಸಹಾ ಇಲ್ಲ!...... (ಬಸವಯ್ಯನಕಡೆ ತಿರುಗಿ) ಬಸವಯ್ಯಾ! ನಿನ್ನ ವರ್ಗದ ವಿಷಯವೇನಾಯಿತು?

**ಬಸವ**— ಯೆಡ್ ಮೇಸಟರು ಮೇಲಕ್ಕೆ ಬರೆದಿದ್ದರು ಬುದ್ದಿ; "ಇವನ್ನು ನಮ್ಮ ಸ್ಕೂಲಿನಲ್ಲೇ ಇರಬೇಕೂಂತ". ಅದಕ್ಕೆ ಇನಸ್ಪೇಟರಾಫೀಸಿನಿಂದ ಆಗಾ ಕಿಲ್ಲಾಂತ ಬರೆವೌರೆ. ಅಂಗಿಂಗಾಡಿ ಎಳ್ಡು ತಿಂಗಳ ಸಂಬಳಕ್ಕೆ ಟೋಕರು.

ಅದಿನ್ನ್ಯಾವಾಗ ಬತ್ತೈತೋ ಕೈಗೆ! ಅಂತೂ ನಾನಾಕೊಂಪೇಗೋಗಿ ಎಂಗೆ ಬಾಳ್ತಿ ಬುದ್ದೀ! ಇಲ್ಲೇ ಇದ್ದರೆ ತಮ್ಮ ನೆಳ್ಳನಾಗೆ....

**ಶಾಮು**— ಹುಂ— ನನ್ನ ನೆರಳು— ಕಾಳ್ಗಿಚ್ಚಿನ ನೆರಳು.. ನೀನೀಗೆಲ್ಲಿ ಊಟ ಮಾಡುತಿದ್ದೀ ?

**ಬಸವ**— ಮನ್ಯಾಗೇ ಮಾಡಿಕೋತೀನಿ ಬುದ್ದಿ ಒಪ್ಪತ್ತು.

**ಶಾಮು**— ಲಿಂಗಮ್ಮ ಯಾವತ್ತು ಬರುತ್ತಾಳೆ ಊರಿಂದ ?

**ಬಸವ**— ದೊಡ್ಡವ್ವಾವರಕೂಡ ಬರಬೋದು

**ಶಾಮು**— ಅಮ್ಮ ಈಗ ಬರೋದೇ ಇಲ್ಲವಂತೆ, ಪಾತು ಬರಬೇಕೂಂತ ಒದ್ದಾಡ್ತಾ ಇದ್ದಾಳಂತೆ ನೋಡಬೇಕು. ಇನ್ನೊಂದೆರಡು ದಿವಸ ಸುಸೂತ್ರವಾಗಿ ಕಳೆದರೆ ಆಮೇಲೆ ಬಹಳ ಕಷ್ಟ ಕಡಿಮೆಯಾದೀತು

**ಬಸವ**— ಅಂಗಂದ್ರೇನು ದೇವ್ರೇ ?

**ಶಾಮು**— ನಾಡಿದ್ದು ಗೌರೀಹಬ್ಬ ಅಲ್ಲವೇ ? (ಮೂಕಾಗುವನು)

**ಬಸವ**— ಔದೂ ಬುದ್ದಿ! ಅದಕೇ ಚಿಕ್ಕವ್ವಾವ್ರು ಶಾಸ್ತ್ರಿಗೋಳನ ಬರೇಳಿ ಇಷ್ಟೊತ್ತೂ ಮಾತನಾಡುತಿದ್ದರು.

**ಶಾಮು**— ಗೊತ್ತೂ ..ಅದಕ್ಕೇನಾದರೂ ಏರ್ಪಾಡು ಮಾಡಬೇಕು ನಿನ್ನಲ್ಲೇನೂ ದುಡ್ಡುಗಿಡ್ಡು ಸಿಗೋಹಾಗಿಲ್ಲವೇ ?

**ಬಸವ**— (ವಿನಯ ದುಃಖಗಳಿಂದ) ಬಗವಂತನಾಣೆಗೂ ಇಲ್ಲ ಬುದ್ದೀ, ನನ್ನ ಆಳ ಸಂಬಳಾನಾರ ಬಾದಿದ್ದಿದ್ದರೆ ನಿಮ್ಮ ಅಬ್ಬದ ಖರ್ಚಿಗೆ ಕೊಟ್ಟುಬಿಡುತ್ತಿದ್ದೆ. ತಮ್ಮ ಮುಂದೆ ಸುಳ್ಳೇಳಿದರೆ ನನ್ನ

**ಶಾಮು**— ಹಾಂ! ಹಾಂ! ತಡಿ! ನಾನು ಸುಮ್ಮನೇ ಕೇಳಿದೆ ಅಷ್ಟೆ ಹೋಗ್ಲಿ ಬಿಡು ನೀನು ಈಗ ನಮ್ಮ ಸೊಸೈಟಿ ಸೆಕ್ರಿಟರಿಗಳ ಮನೆಗೆ ಹೋಗಿ ನಾನು ಕೊಡೋ ಕಾಗದ ಅವರ ಕೈಗೆ ಕೊಟ್ಟು, ಏನು ಜವಾಬು ಕೊಡುತಾರೋ ತಗೊಂಡು ಬರ್ತೀಯಾ ?

**ಬಸವ**— ಆಗಲಿ ಬುದ್ದೀ !

[ಶಾಮಣ್ಣನು ಜೇಬಿನಿಂದ ಪೆನ್ಸಿಲ್ ತೆಗೆದು ಒಂದು ಚೀಟಿ ಬರೆದುಕೊಟ್ಟು ಕಳುಹಿಸುವನು. ಬಸವಯ್ಯನು ಅದನ್ನು ತೆಗೆದುಕೊಂಡು ಹೊರಟು ಹೋಗುವನು.]

**ಶಾಮು**—(ಬಾಗಿಲಬಳಿಗೆ ಬಂದು ರತ್ನಮ್ಮನನ್ನ ನೋಡಿ) ಬಾ! ರತ್ನಾ! ಕೂತುಕೋ! (ರತ್ನಮ್ಮನು ಹತ್ತಿರ ಮಂಚವನ್ನೊರಗಿ ಕೂಡುವಳು—ಅವಳ ತಲೆಯನ್ನು ನೇವರಿಸುತ್ತಾ) ನಿರ್ಭಾಗ್ಯನಾದ ನನ್ನ ಕೈಹಿಡಿದಿದ್ದಕ್ಕೆ ದಿನ ಬೆಳಗಾದರೆ ಉಪವಾಸವಿರಬೇಕಾದ ಸ್ಥಿತಿ ಬಂತಲ್ಲವೇ ನಿನಗೆ?

**ರತ್ನ**—ಒಂದು ತಿಂಗಳು ಬೇಕಾದರೂ ಉಪವಾಸವಿರುತೇನೆ—ಆದರೆ .

**ಶಾಮು**—ಆದರೆ! ಆದರೇನು ಹೇಳು ರತ್ನ—

**ರತ್ನ**—ಹೇಳಿಬಿಡಲೇ, (ಮುಖವನ್ನು ನೋಡುತ್ತಾ ಕಂಬನಿದುಂಬಿ) ಇಲ್ಲ, ನಿಮ್ಮ ಬಟ್ಟೆಬರೆಗಳನ್ನೂ, ಉಪವಾಸದಿಂದ ಬಾಡಿರೋ ಮುಖಾನೂ ನೋಡಿದರೆ ಈ ಹಾಳು ನಾಲಿಗೆ ನುಡಿಯದಿರೋದು ಒಳ್ಳೇದೂನ್ನಿಸತ್ತೆ.

**ಶಾಮು**—ಹೇಳು ರತ್ನ, ಅನುಮಾನಿಸಬೇಡ—ನನ್ನೀಕಷ್ಟ ಕಾರ್ಪಣ್ಯಗಳಿಗೆಲ್ಲಾ ನಾನೇ ಹೊಣೆ. ದೊಡ್ಡವರ ಮನೇಲಿ ಹುಟ್ಟಿ ಬೆಳೆದ ನಿನ್ನನ ಕಷ್ಟಪಡಿಸೋದಕ್ಕೆ ನನಗ್ಯಾವ ಹಕ್ಕೂ ಇಲ್ಲ. ನಿನ್ನ ಮನಸ್ಸಿನಲ್ಲಿರೋದನ್ನ ನಿಸ್ಸಂಕೋಚವಾಗಿ ಹೇಳು

**ರತ್ನ**—ಏನೂ ಇಲ್ಲಾ, ..ಆಂ.. ನಾಳಿದ್ದು....

**ಶಾಮು**—ಹೂಂ, ನಾಳಿದ್ದು—

**ಶಾಮು**—(ಕುತೂಹಲದಿಂದ) ಏನು ಯೋಚಿಸುವಿರಿ? ನಾಳಿದ್ದು ಏನು ಹೇಳಿ?

**ಶಾಮು**—ನಾಳಿದ್ದು ಗೌರೀಹಬ್ಬ; ಹೆಣ್ಣು ಮಕ್ಕಳ ಹಬ್ಬ; ವರ್ಷಕ್ಕೊಮ್ಮೆ ಬರುವ ಹೆಣ್ಣು ಮಕ್ಕಳ ಪ್ರಾಣಸಮಾನವಾದ ಪೂಜ್ಯಹಬ್ಬ; ತಮ್ಮ ಗಂಡಂದಿರ ಶ್ರೇಯಸ್ಸಿಗಾಗಿ, ತಮ್ಮ ಮಾಂಗಲ್ಯ ಚಿರಾಯುವಾಗಿರಲೀಂತ ಮಾಡೋ ದೊಡ್ಡ ಹಬ್ಬ

**ರತ್ನ**—(ಸಂತೋಷದಿಂದ) ಅಲ್ಲವೇ? ನಾನು ಹೇಳಬೇಕೂಂತಿದ್ದದ್ದೆನ್ನೆಲ್ಲಾ ನೀವೇ ಹೇಳಿಬಿಟ್ಟರಲ್ಲಾ .ಇದೆಲ್ಲಾ ನಿಜವಲ್ಲವೇ?

**ಶಾಮು**—ನಿಜವಿರಬೇಕು. ಶಾಸ್ತ್ರಿಗಳು ಹಾಗಂತ ಹೇಳುತಾರೆ.

**ರತ್ನ**—(ಯೋಚನೆಯಿಂದ) ನಿಮ್ಮಕೈಲಿ ಯಾವಾಗ ಹೇಳಿದರು?

**ಶಾಮು**—ನಿನ್ನ ಕೈಲಿ ಹೇಳುತ್ತಿದ್ದಾಗ.

**ರತ್ನ**—(ಗಾಬರಿಯಿಂದ) ನೀವೆಲ್ಲಿದ್ದಿರಿ ?

**ಶಾಮು**—ಬಾಗಿಲಬಳಿ!

**ರತ್ನ**—(ದುಃಖದಿಂದ) ಅಷ್ಟುಹೊತ್ತು ಗಂಟನ್ನ ಹೊತ್ತುಕೊಂಡು ನಿಂತಿದ್ದಿರಾ ?

**ಶಾಮು**—ಜ್ಞಾಪಕವಿಲ್ಲ.

**ರತ್ನ**—(ಸಂತಾಪದಿಂದ ಕಂಬನಿದುಂಬಿ) ಅಯ್ಯೋ! ನನ್ನದು ಶತಾಪರಾಧವಾಯಿತು. (ಕಾಲು ಹಿಡಿದು) ಕ್ಷಮಿಸಿ, ನಿಮ್ಮ್ಯೋಕಷ್ಟದಲ್ಲಿ ಪೂಜೆ ಎಲ್ಲಿ ಬೇಡಾಂದುಬಿಡುವಿರೋಂತ ಶಾಸ್ತ್ರಿಗಳನ್ನ ಕರೆಸಿ ಕೇಳಿ ದುಡುಕಿದೆ-ತಪ್ಪಾಯಿತು—ಕ್ಷಮಿಸಿ.

**ಶಾಮು**—(ಅವಳ ಕೈಗಳನ್ನ ತನ್ನಕೈಲಿಟ್ಟು) ನಿನ್ನದು ಅಪರಾಧವಲ್ಲ ರತ್ನ ; ನಿಮ್ಮ ಮಾತುಗಳನ್ನ ಮರೆಯಲ್ಲಿ ನಿಂತುಕೊಂಡು ಕೇಳಿಸಿಕೊಂಡಿದ್ದು ನನ್ನದು ಅಪರಾಧವಾಯಿತು.

**ರತ್ನ**—(ನಿಧಾನಿಸಿ) ಅವರು ಹೇಳಿದ್ದೆಲ್ಲಾ ನಿಜವಲ್ಲವೇ ?

**ಶಾಮು**—ನಿಜವಿರಬೇಕು.

**ರತ್ನ**—ಹಾಗಾದರೆ ?

**ಶಾಮು**—ಹಾಗಾದರೆ !

**ರತ್ನ**—ಮಾವನೋರ ಮಾತು ಹಿಂದಕ್ಕೆ ತಗೊಳ್ಳೋದಿಲ್ಲವೇ ?

**ಶಾಮು**—ಯಾವ ಮಾತು ?

**ರತ್ನ**—ನಮ್ಮ ಮದುವೆಯಾದ ವರುಷ ಅಪ್ಪನಿಗೆ ಬರೆದಿದ್ದರಲ್ಲಾ "ನಿನ್ನ ಮನೇದಾಗಿ ಒಂದು ಜಳ್ಳುಕಾಳೂ ನನ್ನ ಮನೇ ಒಳಗೆ ಪ್ರವೇಶಿಸ ಬೇಕಾಗಿಲ್ಲ. ಇದಕ್ಕೆ ವಿರುದ್ಧವಾಗಿ ಕಳುಹಿಸಿದರೆ ನೀ ಚಂಡಾಲ ತಗೊಂಡರೆ ನಾ ಚಂಡಾಲಾಂ"ತ; ಮೊನ್ನೆ ನಾನು ಇಲ್ಲಿಗೆ ಹೊರಟು ಬರೋವಾಗ ಅಪ್ಪ ನಿಮ್ಮ ಮನೇ ಸೀರೇನೆ ಉಡಿಸಿ ಕಳುಹಿಸುತಾ ರೈಲ್ವೇಸ್ಟೇಷನ್ನಿನಲ್ಲಿ ಕಣ್ಣೀರು ಸುರಿಸುತಾ "ನಿಮ್ಮ ಮಾವನೋರ ಮಾತು ನಿನ್ನ ಗಂಡ ಹಿಂದಕ್ಕೆ ತಗೊಳ್ಳದಿದ್ದರೆ ಗೌರೀ ಹಬ್ಬದ ಅರಿಶಿನ ಕುಂಕುಮ ಕೂಡ ಕಳಿಸೋದಿಲ್ಲಾಂತ" ಹೇಳಿ

ಬಿಟ್ಟ ನೀವು ಏನಾದರೂ ಮಾಡಿ ಅಪ್ಪನಿಗೊಂದು ತಂತೀಕೊಟ್ಟುಬಿಡಿ ಈವತ್ತೀಯೆ–"ನೀವು ನಿಮ್ಮ ಮಗಳಿಗೆ ಅರಿಶಿನ ಕುಂಕುಮ ಕಳುಹಿಸಬಹು ದೊಂತ; ನಾನು ನನ್ನ ಪೂಜೇನ ಸರಾಗವಾಗಿ ನೆರವೇರಿಸಿಕೊಳ್ಳುತೇನೆ. ಅದ ರಿಂದ ನಿಮಗೊಂದು ಕಾಸಿನಷ್ಟೂ ತೊಂದರೆಯಾಗದಹಾಗೆ ನೋಡಿಕೊಳ್ಳು ತೇನೆ

**ಶಾಮು**– (ಸ್ವಗತ) ನನ್ನ ಪೂಜೇನ ಸರಾಗವಾಗಿ ನೆರವೇರಿಸಿಕೊಳ್ಳು ತ್ತೀನೆ. ನಿಮಗೊಂದು ಕಾಸಿನಷ್ಟೂ ತೊಂದರೆಯಾಗದಂತೆ ನೋಡಿ ಕೊಳ್ಳುತ್ತೀನೆ ಹುಂ! (ಪ್ರಕಾಶ) ರತ್ನ! ಇದೊಂದು ಕೋರಿಕೆ ಹೊರತು ಇನ್ನೇನು ಬೇಕಾದರೂ ಹೇಳು ಅಗತ್ಯವಾಗಿ ನಡೆಸುತೇನೆ ಮದುವೆಯಾದ ವರುಷಾನೆ ನಿಮ್ಮಪ್ಪ "ನನ್ನಿಂದ ಅವನೊಬ್ಬ ಮನುಷ್ಯನಾದ; ನನ್ನ ಹೆಸರಿ ನಿಂದಾನೆ ಜೀವನ ನಡೆಸುತಾ ಇದಾನೇಂತ" ಅಪ್ಪನ ವಿಚಾರದಲ್ಲಿ ಹೇಳಿದ್ದ ಕ್ಕಲ್ಲವೇ ನಮ್ಮಪ್ಪ ಸಂಕಟಪಟ್ಟು ಮದ್ವೇಸಂಕಲ್ಕೆ, ಉಂಗುರ, ತಟ್ಟೆ ಬಟ್ಟಲು. ಆದಿಯಾಗಿ ಎಲ್ಲಾನೂ ಹಿಂತಿರುಗಿಸಿದ್ದು! ಅಂಥಾ ಅಪ್ಪನ ಹೆಸರಿಗೆ, ಅವನಿ ಷ್ಟಕ್ಕೆ ಮಸಿ ಹಚ್ಚಿ, ನಾಡಿದ್ದು ಗೌರೀಹಬ್ಬ ಅನ್ನೋವಾಗ 'ನೀವು ನಿಮ್ಮ ಮಗಳಿಗೆ ಅರಿಸಿನ ಕುಂಕುಮ-ಅಂದರೆ ದುಡ್ಡ ಕಳುಹಿಸೀ'ಂತ ಬರೆದು. ಆ ದುಡ್ಡಿನಲ್ಲಿ ನೀನು ಭಕ್ಷ್ಯ ಭೋಜ್ಯಗಳನ್ನು ಮಾಡಿ, ನಾನು ತಿಂದು ದಣೀ ಬೇಕೇ? ಅದು ಈ ಜನ್ಮದಲ್ಲಿ ಸಾಧ್ಯವಿಲ್ಲ.

**ರತ್ನ**— ಹಾಗಾದರೆ ನನ್ನ ವ್ರತ.. (ಗದ್ಗದಿತಳಾಗಿ) ನನ್ನ ಮಾಂಗ ಲ್ಯದ ಶ್ರೇಯಸು—

**ಶಾಮು**–. ರತ್ನ! **ನಿನ್ನ ಮಾಂಗಲ್ಯ ನಾನಲ್ಲವೇ!** ನೀನು ಮಾಡೋ ಪೂಜೆ ನನ್ನ ಶ್ರೇಯೋಭಿವೃದ್ಧಿಗಾಗಲ್ಲವೇ! ನನ್ನ ಸುಖ ಸಂತೋಷಗಳಿ ಗಾಗಿ ಅಲ್ಲವೇ! ಈಗೊಟಾಣೆ ಮಣ್ಣಿನ ಗೌರಮ್ಮನನ್ನು ತಂದು, ಅದಕ್ಕೆರಡು ರೂಪಾಯಿ ಕಣ ಉಡಿಸಿ, ಅದರಮುಂದೆ ಕಣ್ಣೀರು ಸುರಿಸುತಾ ಕೈಜೋಡಿಸಿ, 'ನನ್ನಸುಖ ಶ್ರೇಯಸ್ಸನ್ನ' ಬೇಡಿ ಕೃತಾರ್ಥಳಾಗಬೇಕೆ? ಅದೂ ನನ್ನ ಈ ಹೀನಸ್ಥಿತಿಯಲ್ಲಿ? ರತ್ನ! ನಿಜವಾಗಿಯೂ ನೀನು ನಿನ್ನ ಮಾಂಗಲ್ಯವಾದ ನನ್ನ ಶ್ರೇಯಸ್ಸನ್ನ ಬಯಸುವ ಪಕ್ಷಕ್ಕೆ ಈ ವ್ರತದ ಹುಚ್ಚನ್ನ ಬಿಡು.

ಸಾಳಿದ್ದು ಎಂದಿನಂತೆ ಅನ್ನ ಸಾರು ಮಾಡು. ನಾವಿಬ್ಬರೂ ಸೇರಿ ಪರಸ್ಪರ ಶ್ರೇಯೋಭಿವೃದ್ಧಿಗಾಗಿ ದೇವರನ್ನ ಪ್ರಾರ್ಥಿಸಿ, ಒಟ್ಟಿಗೆ ಕೂತು, ಊಟ ಮಾಡೋಣ ಏನೂ ಇಲ್ಲದಿದ್ದರೆ ನಗುನಗುತಾ ಒಟ್ಟಿಗೆ ಉಪವಾಸವಿರೋಣ

**ರತ್ನ**—(ಬಿಕ್ಕುತ್ತಾ) ಹಾಗಾದರೆ ನನ್ನ ವ್ರತ–?

**ಶಾಮು**—ಇದೇ ನಿನ್ನ ವ್ರತ!

**ರತ್ನ**—(ಗದ್ಗದ ಧ್ವನಿಯಿಂದ ಬಿಕ್ಕುತ್ತಾ) ಆಗದು? ನನ್ನ ಮಾಂಗಲ್ಯ ವ್ರತ ನಿಂತುಹೋಗೋ ಪಕ್ಷಕ್ಕೆ, ನಾನು ಪ್ರಾಣ ಇಟ್ಟುಕೊಂಡಿರಲಾರೆ

(ಬಿಕ್ಕುತ್ತಾ ದೂರ ಹೋಗುವಳು)

**ಶಾಮು**—(ಎದ್ದು ಮುಂದೆ ಹೋಗುತ್ತಾ) ನಿಶ್ಚಯವೇ ರತ್ನ?

**ರತ್ನ**—ಗೌರಮ್ಮನಾಣೆಗೂ ನಿಶ್ಚಯ!!

**ಶಾಮು**—(ತಲೆಯನ್ನು ನೇವರಿಸುತ್ತಾ) ಮನೇಲಿ ಗೌರಮ್ಮನ ಕೂರಿಸಿ ಮುತ್ತೈದೇರನ್ನೆಲಾ ಕರೆದು, ಅವರಿಗೆ ಮರೆದಜೊತೇ ಅದನ್ನೆಲ್ಲಾ ಕೊಟ್ಟು ಎಲ್ಲಾ ಮಾಡಬೇಕಲ್ಲವೇ?

**ರತ್ನ**—ಹೌದು.

**ಶಾಮು**—(ಬಾ) ರತ್ನ! ನೀನು ಚಿಂತಿಸಬೇಡ. ನಿನ್ನ ವ್ರತ ನೀನು ಸಂತೋಷದಿಂದ ನಡೆಸು

**ರತ್ನ**—(ಸಂತೋಷದಿಂದ-ಬಿಸಿಲುಮಳೆ) ಹಾಗಾದರೆ ಅಪ್ಪನಿಗೆ ತಂತಿ ಕೊಡುತೀರ?

**ಶಾಮು**—ಈ ಜನ್ಮದಲ್ಲಿಲ್ಲ.

**ರತ್ನ**—ಹಾಗಾದರೆ?

**ಶಾಮು**—ಮೊನ್ನೆ ಬೆಂಗಳೂರಿನಿಂದ ನನ್ನ ಒಬ್ಬ ಸ್ನೇಹಿತ ಬಂದ ಆವನಿಗೆ ಲಾಟರೀಲಿ ಹತ್ತುಸಾವಿರ ರೂಪಾಯಿ ಬಂತಂತೆ. ಅವನು ನನಗೆ ಹದಿನೈದು ರೂಪಾಯಿ ಕೊಡುತೀನೀಂತ ಹೇಳಿದಾನೆ.

**ರತ್ನ**—ಏನು ಸಾಲವೇ?

**ಶಾಮು**—ನನಗೀಊರಿನಲ್ಲಿ ಒಂದು ಕಾಸೂ–ಒಂದು ಕಾಸು ಸಾಲ ಕೊಡೋರ್ಯಾರು?

**ರತ್ನ**— ಹಾಗಾದರೆ ಸುಮ್ಮನೆ ಕೊಡುತಾನೆಯೇ ?

**ಶಾಮ**— ಹೌದು.

**ರತ್ನ**—(ಆನಂದದಿಂದ) ನೋಡಿದಿರಾ ನನ್ನ ಗೌರಮ್ಮನ ಶಕ್ತೀನಾ ! ಇಂಥಾ ದುರ್ಭಿಕ್ಷದಲ್ಲಿ ಕೂಡ ತನ್ನ ವ್ರತ ಹ್ಯಾಗೆ ಸಾಂಗವಾಗಿ ನೆರವೇರಿಸಿ ಕೊಳ್ಳುತಾಳೆ ನನ್ನ ಸುಮ್ಮಸುಮ್ಮನೆ ಅಳಿಸಿದರಲ್ಲಾ !. ..ನಾಳೆ ಬೆಳಿಗ್ಗೆ ಹೊತ್ತಿಗೆ ಮುಂಚೆ ಎದ್ದು ಗೌರೀಮಂಟಪ ಕಟ್ಟುತೇನೆ.

**ಶಾಮ**— ಬಸವಯ್ಯ ಮಾವಿನಸೊಪ್ಪು ತಂದುಕೊಡುತಾನೆ.

**ರತ್ನ**— ಹೌದು ಹೌದು! ನಾಳೇನೇ ಒಬ್ಬಟ್ಟು ತಟ್ಟಿಟ್ಟುಕೊಂಡರೆ ನಾಡಿದ್ದು ಗೌರೀಬಾಗಿನ ಕೊಡೋದಕ್ಕೆ ಅನುಕೂಲವಾಗುತ್ತೆ....

**ಶಾಮ**—(ಮುಗುಳ್ನಗೆ ಬೀರಲು ಯತ್ನಿಸುತ್ತಾ) ಹೋಗಿ/ನೋಡು, ಒಳಗೇನೋ ಉಕ್ಕಿದ ಹಾಗಿದೆ.

[ರತ್ನಮ್ಮನು ಸಡಗರದಿಂದ ಒಳಕ್ಕೆ ಹೋಗುವಳು.]

**ಶಾಮ**— ಮಾಂಗಲ್ಯ ಶ್ರೇಯೋಭಿವೃದ್ಧಿ ಮಾಡೋದು ಹಣ. ಸತ್ತವರನ್ನ ಸ್ವರ್ಗಕ್ಕೆ ಕಳಿಸೋದು ಹಣ ನನ್ನಂಥ ದರಿದ್ರನ ಮನೆಗೆ ಬರಲು ಬಿಚ್ಚಾಳೆ ಗೌರಮ್ಮನಿಗೆ ಕೂಡ ಅಪಮಾನ

[ಬಸವಯ್ಯನು ಬೀಗದ ಕೈ ಗೊಂಚಲನ್ನು ಹಿಡಿದು ಪ್ರವೇಶಿಸುವನು]

**ಶಾಮ**— ಬೀಗದಕ್ಕೈ ಕೊಟ್ಟರೆ ಬಸವಯ್ಯಾ ?

**ಬಸವ**— ಬೀಗದಕ್ಕೈಯೇನೋ ಕೊಟ್ಟರೂ ಬುದ್ದೀ , ಆದರೆ ..

**ಶಾಮ**— ಆದರೇನು? ನಿನಗೇನು ಅಪಚಾರದ ಮಾತಾಡಿದರೆ ?

**ಬಸವ**—ನನಗಪಚಾರ ಮಾಡಿದರೆ ನನಗದರಿಂದಾಗೋದೇನು ಬಿಡಿ ಬುದ್ದೀ....ಆದರೆ ರಾಯರು— ಸೆಕ್ರೇಟರಿಗಳು ಅಮ್ಮಾವರತಾವ ತಮ್ಮ ಇಚಾರದಾಗೆ ಸೊಟ್ಟಮಾತಾಡಿ ಅನುಮಾನ ಪಟ್ಟರು ಬುದ್ದೀ.

**ಶಾಮ**— ನ್ಯಾಯುವೇ ! ಸೊಸೈಟೀಂದರೆ ಹತಾರ್ರು ಜನರ ಹಣ ಇರೋ ಜಾಗ.ಅದರ ಜವಾಬ್ದಾರಿಯೆಲ್ಲಾ ಅವರೊಬ್ಬರ ಮೇಲೆ ಏನಾದರೂ ಹೆಚ್ಚು ಕಡಿಮೆಯಾದರೆ—

**ಬಸವ**— ಏನು ಬುದ್ದೀ! ನೀವೂ ಇಂಥಾ ಮಾತಾಡುತೀರ ತಾಸೀ

ಲ್ದಾರ್ ಕಿಟ್ಟಪ್ಪನೋರ ಮನೆಯೋರ ಇಚಾರದಾಗೆ ಇಂಥಾ ಗುಮಾನಿ ಮಡಗೋರೂ ...

**ಶಾಮು**— ಹಾಂ. ತಡೀ! ತಡೀ!

**ಬಸವ**— ನಂಗಂತೂ ಕಳ್ಳು ಸುಟ್ಟುಕೊಂಡು ಬಂದು, ಅವರಂಗನ್ನುತ್ತಲೂ ಅಂಗೇ ಬಂದುಬಿಡಬೇಕೂಂತಿದ್ದೆ. ಒಷ್ಟೋತ್ತಿಗೆ ಅವ್ಮಾ ಅವರು "ಶಾಮಣ್ಣನ ವಿಚಾರ ತಿಳಿದೂಕೂಡ,ನೀವಿಂತಾ ಮಾತಾಡಬಾರದು. ಸುಮ್ಕೆ ಬೀಗದೆಸಲಿಲ್ಲಾ ಕಳಿಸಿಬಿಡಿ ನಿಮ್ಮ ಪೆಟ್ಟಿಗ ಬೀಗದ ಕೈ ಕೂಡ ಮಡೀಕೋಬೇಡಿ–ಯಾಕೇಂದರೆ ಶಾಮಣ್ಣ ಇದನ್ನು ನೋಡಿ ಸಂಕಟ ಪಟ್ಟುಕೊಂಡಾನು' ಅಂದರು ರಾಯರು ಆಮೇಕೆ ಮಾತಾಡದೆ ಈ ಎಸಲು ತಂದುಕೊಟ್ಟು 'ಬದ್ರಾವ್ವಾ ಬಸವಣ್ಣ! ತಿರುಗಿ ಓಟೊತ್ತಿಗೆ ನಮ್ಮನೇಗೆ ತಂದುಕೊಟ್ಟುಬಿಡಬೇಕೂಂತ ಏಳಿಬಿಡು' ಅಂದ್ರು ಆಗಲಿ ಬುದ್ದೀಂತ ನಮಸ್ಕಾರ ಮಾಡಿ ಬಂದುಬಿಟ್ಟೆ

**ಶಾಮು**— ಹೋಗಲಿ ಬಿಡು. ನೀನು ಈಗ ಮ್ಯಾನೇಜರ ಮನೆಗೆ ಹೋಗಿಬಿಟ್ಟು, ಅವರಿಗೆ ಖಾಯಿಲೆ ಹ್ಯಾಗಿದೇ ಅನ್ನೋದನ್ನ ತಿಳಿದುಕೊಂಡು ಬಾ ರಾತ್ರಿಗೆ ಸೊಸೈಟಿಯಲ್ಲಿ ನನಗೆ ಬಹಳ ಕೆಲಸ ಇದೆ ನೀನು ಇಲ್ಲೇ ಮಲಗಿಕೊಳ್ಳಬೇಕಾಗುತ್ತೆ

**ಬಸವ**— ಮೇನೇಜರ ಮನೆಗೆ ಓಗಿಬರಲಾ ಬುದ್ದೀ.

**ಶಾಮು**— ಹೂಂ.

[ಬಸವಯ್ಯನು ಕತ್ತನ್ನು ತಗ್ಗಿಸಿಕೊಂಡು ಹೊರಡುವನು.]

**ಶಾಮು**— ನನ್ನ ಅದೃಷ್ಟಕ್ಕೆ ಸರಿಯಾಗಿ ಮ್ಯಾನೇಜರಿಗೆ ಖಾಯಿಲೆ, ಸೆಕ್ರೆಟರಿಗಳು ಅನುಮಾನ ಪಟ್ಟರೂ ತಮ್ಮ ಪೆಟ್ಟಿಗೆ ಬೀಗದಕೈ ಸಮೇತ ಗೊಂಚಲು ಕಳಿಸಿಬಿಟ್ಟಿದಾರೆ. ನನ್ನ ಕೆಲಸವಂತೂ ಸರಗವಾಗಿ ನೆರವೇರುತ್ತೆ ಮುಂದೆ ಮಾನಹೋಗೋ ಸಂದರ್ಭ ಬಂದರೆ ಇದ್ದೇ ಇದೆ ......ಹತ್ತಿರ (ಒಳಗಿನಿಂದ 'ಸ್ವಲ್ಪ ಬರುತೀರಾ,' ಎಂಬ ರತ್ನಮ್ಮನ ಕೂಗು) ಹಸಿದ ಹುಡುಗಿ, ಹಸೀಸೌದೇ ಒಲೇ ಊದುತಾ ಇದೆ ಸಹಾಯ ಮಾಡುತೇನೇಂತ ಹೇಳಿದ ನಾನು ಇಲ್ಲೇ ಕೂತಿದೇನೆ ಇರೋ ಇವತ್ತು ನಾಳೇ ಸುಖವಾಗಿದ್ದುಬಿಡೋಣ.

[ಒಳಕ್ಕೆ ಹೋಗುವನು.]

## ಅಂಕ ೨-ದೃಶ್ಯ ೩

[ಅಶ್ವತ್ಥಕಟ್ಟೆಯ ಪಕ್ಕ· ಬೆಳಿಗ್ಗೆ, ನಂಜಯ್ಯನೊಬ್ಬನೇ ಇರುವನು.]

**ನಂಜ**– ನನ್ನೆಂಡರ ಕಾಯಿಲೇ ಒಂದೇಸಮನಾಗೇ ಐತೆ. ನೇಸಪ್ಪ ನೋರ ಮದ್ದು ಕೂಡಾ ಏನೂ ವಾಸಿಮಾಡಲಿಲ್ಲ ನನ್ನೆಂಡರಿಗೆ ಔಸಿ ಕೊಡತಾ ಕೊಡತಾ ಅವರೇ ಕಾಯಲೆ ಮಲಗಿಬಿಟ್ಟವರೆ ಅವರಿಗ್ಯಾರು ಔಸ್ತಿ ಕೊಡೋರು? ತಮ್ಮ ಕೈಯಿಂದ ತಾವೇ ಮದ್ದು ಕುಡೀಬಾರದಂತೆ ಏನೋ,....ಆ ಸುಬ್ಬರಾಯ ಶಾಸ್ತ್ರಿ ಮಂತ್ರ ಆಕಿದದಿನದಿಂದ ಆ ಗರ ಅನಕ ನಮ್ಮ ಮನೇಮುಂದೆ ಸುಳಿದಿಲ್ಲ ಆ ಬಸರೀಮರದ ನಡು ಕೊಂಬೇನಾಗೇ ನೆಟ್ಟುಕೊಂಡುಬಿಟ್ಟರಬೇಕು.. .(ಪಶ್ಚಾತ್ತಾಪ) ಪಾಪ! ನಮ್ಮ ದೊಡ್ಡ ರಾಯರಿಗೆ ನನ್ನಿಂದ ಇಂತ ಗತೀನೂ ಬಂತಲ್ಲಾಂತ ಒಟ್ಟೆ ಕುದಿತೈತೆ ನಾನೇನುಮಾಡಲಿ! ಸುಬ್ಬರಾಯ ಶಾಸ್ತ್ರಿಗೋಳಿಗೆ ಕಾಲು ಕಟ್ಟಕೊಂಡೇಳಿದೆ- “ಸ್ವಾಮಿ! ಅದನ್ನ ಬಂಧಿಸಿ ನಿಮ್ಮನೇಗೆ ತಗೊಂಡೋಗಿ ದೇವರತಾವ ಮಡಗಿ, ನಮ್ಮ ದೊಡ್ಡ ರಾಯರಿಗೆ ದೇವರ ಕಂಡರೆ ಬೋ ಪಿರೀತಿ ಅಂತ”, ಅವಕವರು ರೇಗಿ, “ಉಂಟೇನಯ್ಯ! ದ್ಯಾವರತ್ತರದಿಂದ ಕಳಚಿಕೊಂಡು ಮನ್ಯಾಗೆಲ್ಲಾ ಸುಳಿಯಾಕೆ ಸುರು ಮಾಡಿದರೇ”ಂತ ಎಗರಾಡಿ, ತಗೊಂ ಡೋಗಿ ಆ ಮರದಾಗೆ ನೆಟ್ಟು, ನಾಲ್ಕಂಗಲ ಕಬ್ಬಿಣದ ಮಳೆ ಜಡಿದು ಬಂದು ಬಿಟ್ಟರು ಇದರಿಂದ ರಾಯರಿಗೆ ನನ್ನಮ್ಯಾಗೆಷ್ಟು ಒಟ್ಟೇಉರಿ ಬಂದಿರ ಬವುದು! .......ಆಂ.. .. (ಯೋಚಿಸಿ) ಒಂದು ಸಮಯ ಆಂ . ಗಾಳಿ ಗೀಳಿ ಯಿಂದ ಆ ಮಳೆ ಸಡಿಲ ಆಗಿಬಿಟ್ಟು, ಅವರೇನಾದರೂ ನುಲಿಚಿಕೊಂಡು ಒಸಿ ಈಚೆಗೆ ಬಂದುಬಿಟ್ಟರು ಸಾಕು. ನನ್ನೂ ನನ್ನೆಂಡರನೂ ಜೀವದೊರಸೆ ಈರಿಬಿಡುತಾರೆ–ಇದಂತೂ ಕಂಡಿತ; ಅದ್ಕೇನೆ ಏನಾದ್ರೂ ಉಪಾಯಮಾಡಿ ಆ ಮಳೆ ಜಡಿದಿರೋ ಕೊಂಬೇನ ಅಂಗೇ ಗರಗಸದಿಂದ ಕೂದು, ಅಗ್ಗ ಆಕಿ ಮೆಲ್ಲಗಿಳಿಸಿಕೊಂಡು, ಒಲೇರ ಕೈಯಾಗೆಕೊಟ್ಟು,ಆ ತುಂಡಬೋದೂರಸಾಗಿಸಿ ಬಿಡಬೇಕು. ಇಲ್ಲದಿದ್ದರೆ ಯಾವದಾದರೂ ದೊಡ್ಡ ಇಟ್ಟಗೇ ಗೂಡೊಳು ಅದನ್ನತೂರಿಸಿ ಮಡಗಿಬಿಟ್ಟು, ಅತ್ತಕಡೆ ಇತ್ತಕಡೆತೂತಿಗೆ ಗಾರೆ ಆಕಿಮುಗೆಚ್ಚಿ

ಚಪ್ಪಡಿಕಲ್ಲು ಜಡಿದು, ಕೆಳಗಿಂದ ಸರ್ವೆಸೌದೆ ತುಂಬಿ, ಉರಿ ಮಡಗಿಸಿಬಿಟ್ಟು, ಆ ತುಂಡು ಉರಿದು ಬೂದಿಯಾಗೋವರೆಗೂ ಸುತ್ತ ನಾಕುಜನ ಕಾದು ನಿಂತಿದ್ದು ಎಲ್ಲಾ ತಣ್ಣಗಾಗತ್ತುಲೂ ಇಂತಿರುಗಿ ಬರಬೇಕು,.... . ಆ ಒಗೇಲೇ ತೂರಿ ಮ್ಯಾಕೆ ಬಂದುಬಿಟ್ಟರೇ ? . (ಬೆದರಿ) ಏನುಮಾಡೋದು ?. .. (ತಗ್ಗಿದ ಧ್ವನಿಯಲ್ಲಿ) ಎಷ್ಟುದಿನ ಆದರೂ ನನಗೆ ಇದರ ಬಯ ಎಚ್ಚತಾನೇ ಓಗುತ್ತಾ ಐತೆ. ಎಲ್ಲಿ ನಿಲ್ಲಲಿ, ಎಲ್ಲಿ ಕುಂತಿರಲಿ, ಎಲ್ಲಿ ಮನಗಲಿ—ಅದೇ ಕಪ್ಪನೇ ನೆಳ್ಳು—ಅದೇ ದನಿ—"ಲೋ ನಂಜಾ ? ಸಾವಿರ ರೂಪಾಯಿ ದಗಾ! ದಗಾ"ಂತ. ಸಮ್ಮಕೆ ನೆನಸತಿದ್ದರೆ ನಾಕು. ಮೈ ಜುಂ ಅಂತೈತೆ—ಗುಂಡಿಗೆ ಗಡ್ಡಾ ಗಡ್ಡಾಂತ ನಡುಗುತ್ತೈತೆ.

**ಸುಬ್ಬರಾಯ ಶಾಸ್ತ್ರಿ**—(ಹಿಂದಿನಿಂದ ಪ್ರವೇಶಿಸಿ) ನಂಜಾ ! ನಂಜಾ

**ನಂಜ**—(ಕುಕ್ಕುರುಗಾಲಿನಲ್ಲಿ ಕೂತು ಕತ್ತನ್ನು ತಗ್ಗಿಸಿ ನಡುಗುತ್ತಾ ಕಣ್ಣು ಕಣ್ಣು ಬಿಡುತ್ತಾ) ಅಯ್ಯೋ! ದೇವರೇ! ಯಾಕಾದರೂ ನೆನಸಾ ಕೋದನೋ ಈಟೊತ್ತಿನಲ್ಲಿ ಇಲ್ಲೀ !!

**ಸುಬ್ಬ**—ಲೋ ನಂಜಾ !

**ನಂಜ**—ಅಯ್ಯಯ್ಯಪ್ಪಾ. (ಭಯದಿಂದ ಬೆವರುವನು.)

**ಸುಬ್ಬ**—ನಂಜಾ ! ನಂಜಯ್ಯಾ ! ಲೋ ನಂಜಯ್ಯಾ!!

**ನಂಜ**—(ಕತ್ತೆತ್ತದೆ) ಬುದ್ದೀೀೀ !

**ಸುಬ್ಬ**—ಇಲ್ಲೇನು ಮಾಡುತಾ ಕೂತಿದೀಯೋ ಹೀಗೆ ?

**ನಂಜ**—ಏನೂ ಇಲ್ಲ ನನ್ನೊಡೆಯಾ ಆ ಆ ಾ ಾ !

**ಸುಬ್ಬ**—ಏಳಯ್ಯಾ ! ಪಾಪ, ರಂಗನಾಥರಾಯರಿಗೆ ಕಾಯಿಲೆ ಹೆಚ್ಚಾಗಿದೆ ನೆನ್ನೆಯಿಂದ ನಿನ್ನ ಹೆಸರನ್ನೆ ಹಿಡಿದು ಕೂಗುತಾ ಇದಾನೆ ನಂಜಯ್ಯಾ ಏಳು ! ಹಿಂದಿನದನ್ನೆಲ್ಲಾ ಮರೆತು .. ...

**ನಂಜ**—(ಮೆಲ್ಲಗೆ ಕತ್ತೆತ್ತಿ) ತಾವು . . ?

**ಸುಬ್ಬ**—ಯಾಕೋ ಹೀಗೆ ಮಾತನಾಡುತೀ ? ಹೆಂಡ ಕುಡಿದಿದೀಯೋ ನೋ ?

**ನಂಜ**—(ತಿರುಗಿನೋಡಿ) ತಾನೇಬುದ್ದೀ! ಸುಬ್ಬರಾಯ ಶಾಸ್ತ್ರಿಗೋಳು! ಅದಕೇ ಬಾಯಿತುಂಬಾ ಎಂಡಾ ಗಿಂಡಾನ್ನೋ ಮಾತು ಸಲೀಸಾಗಿ ಬರುತೈತೆ. ನಾನು ಯಾರೋಂತ ಏನೋ ಯೋಚನೆ ಮಾಡತಿದ್ದೆ (ಎದ್ದು) ರಂಗಸಾಧರಾರಿಗೆ ಕಾಯಿಲೆ ಎಚ್ಚಾಗೈತ?

**ಸುಬ್ಬ**—ಹೌದಯ್ಯಾ! ಅದಕ್ಕೆ ನಿನ್ನ ಹುಡಿಕ್ಕೊಂಡು ಮನೇಗೆ ಹೋದೆ ನಿನ್ನ ಹೆಂಡತಿ ಹಾಸಿಗೇಮೇಲೆ ಆಗತಾನೆ ಎದ್ದು ಕೂತಿದ್ದಳು. ನಾನು ತಗೊಂಡುಹೋಗಿದ್ದ ಸತ್ಯನಾರಾಯಣನ ಪ್ರಸಾದ ಅವಳಿಗೆ ಕೊಟ್ಟು ಬಿಟ್ಟು, ನೀನಿಲ್ಲಾನ್ನೋದನ್ನ ತಿಳಕೊಂಡು ಇಲ್ಲೆಲ್ಲಾ ಹುಡುಕುತಾ ಬಂದೆ

**ನಂಜ**—(ಹಿಂಡಿದ ಮನಸ್ಸಿನಿಂದ) ಪರಸಾದ ತಗೊಂಡೋಗಿದ್ದಿರಾ ಮನೇತಾಕೆ!—ಸರೀ! ನಾನೂ ನಮ್ಮ ರಾಯರನ್ನ ನೋಡಬೇಕೂಂತಿದ್ದೆ. ಈಗ ಅವರೇ ಏಳಿಕಳಿಸಿದಂಗಾಯ್ತು. ಈಗಲೇ ಅವರ ಮನೇತಾಕೋಗ್ತೀನಿ. ಬುದ್ದೀ! ಈಚೆಗೆ ಆ ಬಸರೀ ಮರದಕಡೀಕೋಗಿದ್ದರಾ?

**ಸುಬ್ಬ**—ಯಾಕಯ್ಯಾ?

**ನಂಜ**—ಅಲ್ಲ ಓಗಿ, ಆ ನಡುಕೊಂಬೇ ಅಲ್ಲೀ ಐತೋ, ಚಿಗುರುತಾ ಐತೋ, ಒಣಗೋಗ್ತಾ ಐತೋ, ನೋಡಿದಿರಾಂತ ಕೇಳಿದೆ

**ಸುಬ್ಬ**—ಅದರ ಯೋಚನೆ ಯಾಕೋ ಈಗ?

**ನಂಜ**—ಬ್ಯಾರೆ ಯೋಚನೆ ಮನಸ್ಸಿನತಾಕೆ ಬರಾಕೆ ಇಲ್ಲವಲ್ಲ ಏನ್ಮಾಡಲೀ! ನೀವು ಒಂಡಿ, ನಾನು ಕೆರೇಕಡೆ ಓಗಿ ಈಗ ಬಂದು ಬಿಡುತೀನಿ. (ನಿಷ್ಕ್ರಮಣ.)

**ಸುಬ್ಬ**—(ಅಡಿಕೆಲೆಗೆ ಹೊಗೆಸೊಪ್ಪು ಹಾಕಿಕೊಂಡು ಜಗಿಯುತ್ತಾ, ಒಳಜೇಬಿನಿಂದ ಸಿಗರೇಟು ತೆಗೆದು ಹತ್ತಿಸಿ ಸೇದುತ್ತಾ) ...ಓದೋ ವಯಸ್ಸಿನಲ್ಲಿ ಪೋಲೀಬಿದ್ದು ವಿದ್ಯಾ ಕಳಕೊಂಡೆ ಆಂ!; ವಂಶ ಪಾರಂಪರ್ಯವಾಗಿ ಬಂದಿರೋ ಪೌರೋಹಿತ್ಯ—ಅದನ್ನೂ ಕಲೀದೆ, ಪಡಪೋಸಿ ಮಾಡಿ ಅಡ್ಡಕಸಬಿ ಆಗಿಬಿಟ್ಟೆ. ಇದರಿಂದ ಹೋದಕಡೆ ಬಂದಕಡೆ ಅಪಮಾನ ತೊಟ್ಟಿ ಕೃಷ್ಣಪ್ಪ ಅವನ ಮಗಳ ಮದುವೆಯಲ್ಲಿ ಧಾರೇಗಿಂತ ಮುಂಚೇನೇ ಕತ್ ಹಿಡಿದು ದಬ್ಬಿಬಿಟ್ಟ ಅಷ್ಟು ಜನರೆದುರಿಗೆ—ನಾನೇನುಮಾಡಲಿ! ವಾಲಗ

ಆಗುತಿರೋವಾಗ ಗಟ್ಟಿಯಾಗಿ ಮಂತ್ರ ಹೇಳುತಿರುವೆ; ಅವರು ನಿಲ್ಲಿಸಿದರೆ ನನ್ನ ಮಂತ್ರಾನೂ ನಿಂತುಹೋಗಿಬಿಡೋದು. ಇದರಿಂದ ಸೇದುತ್ತಿದ್ದ ಗೋಲ್ಡ್‌ಫ್ಲೇಕ್‌ಗೂ ಕಲ್ಲುಬಿದ್ದು ಈ ವಾಚ್‌ಗಿಳೀ ಬೇಕಾಯ್ತು (ಇನ್ನೆರಡು ದಮ್ ನಿಧಾನವಾಗೆಳೆದು ಹಲ್ಲಿನ ಸಂದೀಲಿ ಹೊಗೆಬಿಡುತ್ತಾ) ನನ್ಯಾರಾದರೂ ಶಾಸ್ತ್ರೀಂದರೆ, ಮೈಯೆಲ್ಲಾ ಉರಿದುಹೋಗುತ್ತೆ. ನಾನು ಏನಾದರೂ ಮಾಡಿ ನನ್ನ ಹೆಸರನ್ನೂ "ಸುಬ್ಬರಾವ್" "ಸುಬ್ರಮಣಿಯಂ"–"ಸುಬ್ಬೀ" (ಮೆಯ್ಬಿಸಿ) "ಮಣಿಯಂ" ಅಥವಾ "ಮಿಸ್ಟರ್ ಮಣೀ" ಅಂತ ಬದಲಾಯಿಸಿಕೊಂಡುಬಿಟ್ಟು, ಎಲ್ಲಾದರೂ ಬೆಂಗಳೂರಿಗೋ-ಮದ್ರಾಸಿಗೋ ಹೋಗಿ, ಒಂದು ಭಾರೀ ಹೋಟಲ್‌ನಲ್ಲಿ ತಿಂಡೀ ಸಪ್ಲೈಗೆ ನಿಂತುಬಿಡುತ್ತೇನೆ. (ಇನ್ನೊಂದು ದಮ್ ಎಳೆದಿರುವನು ಹಿಂದಿನಿಂದ ನಂಜಯ್ಯನು ಬಂದು ನಿಲ್ಲುವನು ಶಾಸ್ತ್ರಿ ಹೆಜ್ಜೆ ಸಪ್ಪಳ ಕಂಡು ಹೊಗೆಯನ್ನು ನುಂಗುತ್ತಾ ಕಣ್ಣು ಕಣ್ಣು ಬಿಡುವನು)

**ನಂಜ**— ಬುದ್ಧೀ! ತಾವೂ ಒಗೇ ಕುಡೀತೀರ?

**ಸುಬ್ಬ**—(ನುಂಗಿ) ಛೀ! ನಾನು ಹೊಗೆ ಕುಡೀತೀನೆಯೇ! ಹಾಗೆಲ್ಲಾ ಮಾಡಿದರೆ ನಮ್ಮ ಕೈಯಿಂದ ಪೂಜೆ ಹಾಕಿ ಗ್ರಹ ಬಂಧಿನೋದಕ್ಕಾಗುತ್ತದೇನಯ್ಯಾ?

**ನಂಜ**— ಅಂಗೆ ಮಾಡಿದರೆ?

**ಸುಬ್ಬ**— ಮಾಡಿದರೆ? ಸಿದ್ಧಿಸೋದಿಲ್ಲ ಅಷ್ಟೆ.

**ನಂಜ**—(ಗಾಬರಿಯಿಂದ) ಗರ ನುಲಿಚಿಕೊಂಡು ಬಂದುಬಿಡಬಹುದಲ್ಲವಾ?

**ಸುಬ್ಬ**— ಆಹಾಂ!

**ನಂಜ**—(ನಡುಗುತ್ತಾ) ಅಂಗಾರೆ ನನ್ನ ಗತಿ ಏನು ಬುದ್ಧೀ!

**ಸುಬ್ಬ**— ಯಾಕೋ?

**ನಂಜ**— ನೀವು ಒಗೇ ಕುಡೀತಾ ಇದ್ದೀರಿ; ಆ ಬಸರೀ ಮರದಾಗೆ ದೊಡ್ಡರಾಯರನ್ನ ಮಳೆ ಬಡಿದು.

**ಸುಬ್ಬ**—(ಹೊಸಗಿ ಪುಡಿಯನ್ನು ತೋರಿಸುತ್ತಾ) ನೋಡಯ್ಯಾ!

ಇದು ಸಿಗರೇಟಲ್ಲ! ಜ್ಞಾಪಕ ಶಕ್ತಿ ಹೆಚ್ಚಿಸಿ, ತಪಶ್ಯಕ್ತಿಗೆ ಅನುಕೂಲ ಮಾಡೊ ಘಟ್ಟ ಪುಷ್ಟಿಕಾನ್ನೋ ಬೇರಿನ ಪುಡಿ ಕಾಳಿದಾಸನ ಕಾರಿಣ್ಯ ಯೋಗ್ಯಶಾಸ್ತ್ರದ ಏಕಾದಶೀ ಅಧ್ಯಾಯದಲ್ಲಿ ಇದಕ್ಕೆ ಸೌಭಾಗ್ಯನರ್ತಿ ಅಂತ ಹೆಸರಿಟ್ಟಿದ್ದಾನೆ–ತಿಳೀತೇ ?

**ನಂಜ**– (ಅನುಮಾನಿಸಿ) ಔದಲ್ಲವಾ ಬುದ್ಧೀ!

**ಸುಬ್ಬ**– ಬಾ! ಇನ್ನೂ ಬಹಳಾ ಇದೆ, ಹೇಳುತೀನಿ ಮೀಮಾಂಸ ಸೂತ್ರದ ದಶಮಸ್ಕಂದದ ಅರಣ್ಯಕಾಂಡದಲ್ಲಿ ಇದರ ವಿಚಾರವಾಗಿ ಪಾತಂಜಲೀ ಘನಪಾಟಿಗಳು ಅಂ!

ಅಗ್ನಿಹೋತ್ರಂ ಕುರುಷ್ಯಾಮಿ |
ನಹಿ ಜ್ಞಾನೇನ ಸದೃಶಂ ||
ಶ್ರದ್ಧಾಹಿ ಪರಮಾಗತಿಃ |
ಯತ್ರನಾರ್ಯಸ್ತು ಪೂಜ್ಯಂತೇ |
ರಮಂ ತೇ ತತ್ರ ದೇವತಾಃ ||

(ಹೇಳುತ್ತಾ ಹೋಗುವನು, ನಂಜನು ಹಿಂಬಾಲಿಸುವನು.)

---

## ಅಂಕ ೨–ದೃಶ್ಯ ೪

[ರಂಗನಾಥರಾಯನ ಮನೆ. ಮಂಚದ ಮೇಲೆ ರಾಯನು ಬೆಳೆದ ಗಡ್ಡ ಮೀಸೆಗಳಿಂದ ಕೂಡಿ ಮಂಚದ ಮೇಲೆ ಕಂದಿ ಮಲಗಿರುವನು. ಕಾಲಬಳಿ ನಂಜನು ನಿಂತಿರುವನು.]

**ರಂಗ**– ನಂಜಾ! ನಾನು ಹ್ಯಾಗೆ ಬದುಕಿರಲೋ! ಆಗೊಲ್ಲಾ ಕಣೋ! ನಾನು ಬದುಕಿರಲಾರೆ!

**ನಂಜ**– ಇದ್ಯಾಕೆ ಬುದ್ಧೀ ನೆನ್ನೆಯಿಂದ ಇಂಗೇ ಅಂತಿದೀರಲ್ಲಾ ?

**ರಂಗ**– ಹೌದಪ್ಪಾ! ಶಾಸ್ತ್ರಿಗಳು ಬಂದರೆ ಎಲ್ಲಾ ಹೇಳಿಬಿಡುತೀನಿ ಕಣೋ!

**ನಂಜ**– ಅಂಗೇ ಮಾಡಿಬಿಡಿ ಬುದ್ಧೀ!

**ರಂಗ**— (ಎದ್ದು ಸುತ್ತಲೂ ನೋಡಿ ನಿರಾಶಾದೃಷ್ಟಿಯಿಂದ ಎದೆ ಬಡಿದು ಕೊಳ್ಳುತ್ತಾ) ಅಯ್ಯೋ ನಂಜಾ! ನಾನು ಪಾಪರ್ರಾದೆನಲ್ಲೋ ! ನಾನು ಹ್ಯಾಗೆ ಬದುಕಿರಲಪ್ಪಾ ! . ನಂಜಾ ! ಪಾಪರ್ರಾದೆನಲ್ಲೋ !!

**ನಂಜ**— (ಕಳವಳದಿಂದ, ಬುದ್ದೀ ! ನಿಮ್ಮ ಮೈಗೂ, ಮನಸ್ಸಿಗೂ ಇಸ್ರಾಂತಿ ಕೊಡದಿದ್ದರೆ, 'ಉಚ್ಚಿಗೆ ತಿರುಗುತ್ತೈತೇಂ'ತ ಡಾಕಟರು ಏಳೋಗ ಲಿಲ್ಲವಾ ಬುದ್ದೀ ! ಒಸಿ ಸುದಾರಿಸಿಕೊಳ್ಳೀ ದ್ಯಾವರೇ !

**ರಂಗ**— ಇಲ್ಲಾ ! ಇದೇ ಊರಿನಲ್ಲಿ ಒಳ್ಳೇ ಹುಲಿಹಾಗೆ ಬಾಳಿ, ಈಗ ಹುಚ್ಚನಾಗಿ ಅಲೆಯೋ ಹಾಗಾದರೆ, ನಾನು ಮೊದಲೇ ಕೆರೇಗೆಬಿದ್ದು ಪ್ರಾಣ ಕಳೆದುಕೊಂಡುಬಿಡುತೀನಿ ! ಎಂಟೂವರೆಸಾವಿರ ರೂಪಾಯಿ ! ನಂಜಾ ! ನಾನು ಪಾಪರ್ರಾದೆನಲ್ಲೋ! ಅಯ್ಯೋ! ನಂಜಾ! ಹೊಟ್ಟೆ ಉರಿಯುತ್ತಲ್ಲೋ!

**ನಂಜ**— (ಸಪ್ಪಳ) ಬುದ್ದೀ ! ಶಂಕರಪ್ಪನೋರು ಬಂದರು

**ರಂಗ**— (ಎದ್ದು ಬಾಗಿಲಕಡೆ ನೋಡಿ, ಸಂತಾಪ ಸಂತೋಷಗಳಿಂದ) ಯಾರೂ ! ಶಾಸ್ತ್ರಿಗಳೇ ?

**ಶಾಸ್ತ್ರಿ**— (ಬಂದು ಹತ್ತಿರ ನಿಂತು) ಹೌದು ರಾಯರೇ ! ಇದೇನು ಹೀಗಾಗಿಬಿಟ್ಟಿದ್ದೀರಲ್ಲಾ ?

**ರಂಗ**— ಬನ್ನಿ ಕೂತುಕೊಳ್ಳಿ ಶಾಸ್ತ್ರಿಗಳೇ ! ಒಳ್ಳೇ ದೇವರಹಾಗೆ ಬಂದಿರಿ !

**ಶಾಸ್ತ್ರಿ**— ಇರಲಿ , ನೀವು ಆರಾಮವಾಗಿ ಮಲಗಿಕೊಳ್ಳಿ (ಕುಳಿತು ಹಣೇಮುಟ್ಟಿ) ಇದೇನು, ಜ್ವರ ಸುಡುತಾಇದೆಯಲ್ಲಾ ! ಯಾವ ಡಾಕ್ಟರಿಗೂ ಹೇಳಿಕಳುಹಿಸಲಿಲ್ಲವೇ ?

**ರಂಗ**— ಬಂದಿದ್ದ ನಮ್ಮ ಫ್ರೆಂಡ್ ಭೂರ್ಷ. ಅವರೆಲ್ಲರಿಗಿಂತ ನೀವು ನನಗೊಂದುಪಕಾರ ಮಾಡಿದರ, ನಾನು ಉಳುಕೊಳ್ಳುತೀನಿ ಸ್ವಾಮೀ !

**ಶಾಸ್ತ್ರಿ**— ರಾಯರೇ ! ನಿಮ್ಮ ಸುಖಕ್ಕೆ ನಾನೇನು ಬೇಕಾದರೂ ಮಾಡೋಕೆ ಸಿದ್ಧವಾಗಿದೇನೆ

**ರಂಗ**— ನಾನು, ಒಂದು ಸಮಯ—ಪರಮನೀಚಾಂತ ಗೊತ್ತಾದರೂ

ಕೂಡ ನೀವು ನನ್ನ ಕೈ ಬಿಡೋಲ್ಲಾಂತ ಕೈಮೇಲೆ ಕೈಹಾಕಿ ಹೇಳಿ ಸ್ವಾಮಿ! (ಕೈ ನೀಡುವನು)

**ಶಾಸ್ತ್ರಿ**—(ಕೈಮೇಲೆ ಕೈಹಾಕಿ) ಸತ್ಯವಾಗಿಯೂ ಇಲ್ಲ!

**ರಂಗ**—ಸ್ವಾಮಿ! ನಾನು ಇಷ್ಟು ವರ್ಷಗಳಿಂದಲೂ ಈ ಊರಿನಲ್ಲಿ ನ್ಯಾಯಾನ್ಯಾಯಕ್ಕೆ ಅಷ್ಟು ಗಮನ ಕೊಡದ್ಲೆ, ಧರ್ಮಾಧರ್ಮ ನೋಡದೆ ಕಷ್ಟಪಟ್ಟು, ಕೂಡಿಟ್ಟ ಎಂಟೂವರೆಸಾವಿರ ರೂಪಾಯನ್ನ ಅರ್ಜುನಸೆಟ್ಟೀ ಹತ್ತಿರ ಇಟ್ಟು, ಅವನಕೈಲೇ ಲೇವಾದೇವಿ ಮಾಡಿಸುತಾ ಇದ್ದೆ.

**ಶಾಸ್ತ್ರಿ**—(ಆಶ್ಚರ್ಯದಿಂದ) ಹಾಗಾದರೆ ಆ ಹಣವೆಲ್ಲಾ ನಿಮ್ಮದೇಯೇ?

**ರಂಗ**—ಹೌದೂ ಸ್ವಾಮಿ! ನಂದಾಗಿತ್ತು! ಆದರೆ...

**ಶಾಸ್ತ್ರಿ**—ಹಾಗಾದರೆ ಶಾಮಣ್ಣನಮೇಲೆ ಡಿಕ್ರೀ ನಡೆಸಿ, ಸಂಬಳಾ ಹಿಡಿಸುತಾ ಇರೋರು ನೀವೆಯೋ—ಆ ಸೆಟ್ಟಿ ಅಲ್ಲಾ?

**ರಂಗ**—ಹೌದೂ ಸ್ವಾಮಿ! ಎಲ್ಲಾ ಮಾಡಿದೋನೂ ನಾನೇ! ಈಗೊಂದು ವಾರದ ಕೆಳಗೆ ಒಂದು ದಿನ ಅವನ ಹತ್ತಿರ ಹೋಗಿ "ನನ್ನ ಪಾಲಿನ ಎಂಟೂವರೆಸಾವಿರ ರೂಪಾಯಿನ ನನಗೆ ಕೊಟ್ಟುಬಿಡು, ನಾನು ಬೆಂಗಳೂರಿಗೆ ಹೋಗಿ, ಬೇರೆ ಬಿಸಿನೆಸ್ಸು ಸ್ಟಾರ್ಟ್ ಮಾಡಬೇಕೂಂತಿದೀನಿ." ಅಂದಿದ್ದಕ್ಕೆ, ನಾಳೆ ಕೊಡುತೀನೀಂತ ಹೇಳಿ, ಅದೇರಾತ್ರಿ ಇದ್ದಬದ್ದದ್ದನ್ನೆಲ್ಲಾ ಫೋಣಿಸಿಕೊಂಡು, ಈ ಊರಿನೋರು ನನ್ನ ಮುಖಾ ನೋಡಿ ಅಡೂ ಇಟ್ಟಿದ್ದ ಸಾವಿರಾರು ರೂಪಾಯಿ ಒಡವೆಗಳನ್ನೂ ಹೊತ್ತುಕೊಂಡು ಪರಾರಿಯಾಗಿ ಬಿಟ್ಟಿದ್ದಾನೆ

**ಶಾಸ್ತ್ರಿ**—ನೀವು ಒಂದುವಾರದಿಂದ ಹ್ಯಾಗೆ ಸುಮ್ಮನಿದೀರಿ ಸ್ವಾಮಿ! ಪೋಲೀಸಿಗೆ ಕಂಪ್ಲೇಂಟ್ ಕೊಡೋಕಿಲ್ಲವೇ—ಆದರೆ ನಿಮ್ಮ ಹಣ ಅವನ ಹತ್ತಿರ ಇರೋದಕ್ಕೆ ನಿಮ್ಮಲ್ಲಿ ದಾಖಲೆ ಇಲ್ಲವೇನೋ?

**ರಂಗ**—ಇಲ್ಲದೇ ಏನು ಸ್ವಾಮಿ! ನೋಡೀ! (ದಿಂಬಿನ ಕೆಳಗಿಂದ ಪತ್ರಗಳ ಗಂಟನ್ನು ತೆಗೆದು) ಅವನಿಗೆ ಕೊಟ್ಟ ಒಂದೊಂದು ಕಾಸಿಗೂ ದಾಖಲೆ ಇದೆ. ಇನ್ನು ಪೋಲೀಸಿಗೆ ಕಂಪ್ಲೇಟ್ ಕೊಟ್ಟರೆ ಆಸಾಮಿ ಎಲ್ಲಾದ್ರೂ ಬಹು

ದೂರ ಜಾರಿಬಿಟ್ವಾನೂಂತ ನಾನೇ ಹೊರಟು ಊರೂರೆಲ್ಲಾ ಅಲೀತಾ ಬೆಂಗಳೂರಿಗೆ ಬಿದ್ದು, ಅಲ್ಲಿ ಬೀದೀಲೆಲ್ಲಾ ಹುಡುಕುತಾ ಸುತ್ತೀ ಸುತ್ತೀ, ಕೊನೇಗೆಲ್ಲೂ ಕಾಣದೆ, ಮೊನ್ನೆ ರೈಲು ಹತ್ತಿ ಕೂತೇ. ಊರು ಸೇರುತಾನೇ ನೂರನಾಲ್ಕು ಡಿಗ್ರೀ ಜ್ವರ ಬಂದಿತ್ತು

**ಶಾಸ್ತ್ರಿ**— ಮನೇಲಿ ನೋಡಿಕೊಳ್ಳೋರುಕೂಡ ಯಾರೂ ಇಲ್ಲ ಪಾಪ. ನಿಮ್ಮ ಮಾವನವರಿಗಾದರೂ ಒಂದು ಕಾಗದ....

**ರಂಗ**— ಸ್ವಾಮಿಾ! ನಾನು ನನ್ನ ಈ ಹೀನ ಸ್ಥಿತೀಲಿ ಭಿಕಾರಿಯಾಗಿ ಅವನ ಮನೇ ಬಾಗಿಲಿಗೆ ಹೋಗಲೇ—ಅದಕ್ಕೆ ಬದಲಾಗಿ ಯಾವುದಾದರೂ ಕೆರೆಯೋ, ಭಾವಿಯೋ ನೋಡಿಕೊಂಡು ಪ್ರಾಣ ನೀಗಿಕೊಳ್ಳುತೇನೆ

**ಶಾಸ್ತ್ರಿ**—ಅಯ್ಯೋ! ಇನ್ನೂ ಬದುಕೀ ಬಾಳಿ ಮಾಡೋರು ನೀವು, ಇಂಥಾ ಮಾತಾಡಬಾರದು.

**ರಂಗ**— ನೀವು ಕೈಹಿಡೀದಿದ್ದರೆ ನನ್ನ ಬಾಳು ಮುಗಿದಹಾಗೆ!

**ಶಾಸ್ತ್ರಿ**— ನನ್ನಿಂದೇನಾಗಬೇಕು—ಅಪ್ಪಣೆ ಕೊಡಿಸಿ, ಅಗತ್ಯವಾಗಿ ನಡೆಸಿಕೊಡುತೇನೆ

**ರಂಗ**— ಸತ್ಯವೇ?

**ಶಾಸ್ತ್ರಿ**— ಸತ್ಯ.

**ರಂಗ**— (ಎದ್ದು) ಸ್ವಾಮಿಾ! ನನಗೆ ಆ ಉಂಗರ ಬಾಬಾಬುಡನ್‌ಗಿರೀಲಿ ಒಬ್ಬರು ಸಾಧುಗಳು ಆಶೀರ್ವಾದಮಾಡಿ ಕೊಟ್ಟದ್ದೂ

**ಶಾಸ್ತ್ರಿ**—(ಆಶ್ಚರ್ಯದಿಂದ ಬೆಚ್ಚಿ) ಯಾವ ಉಂಗುರ ರಾಯರೆ?

**ರಂಗ**—(ಶೂನ್ಯ ದೃಷ್ಟಿಯಿಂದ) ಅದೇ ಸ್ವಾಮೀ! ಪಾತಮ್ಮನಿಗೆ ಅವತ್ತು ಸಿಕ್ಕಿದ್ದು

**ನಂಜ**—ಅಂಗಂದ್ರೇ?

**ಶಾಸ್ತ್ರಿ**—(ಆಶ್ಚರ್ಯ ಕಳವಳಗಳಿಂದ) ನೀವೇ ಶೀನಪ್ಪನ ಪ್ರೇತ ವಾಗಿದ್ದಿರಾ?

**ರಂಗ**— ಹೌದು ಶಾಸ್ತ್ರಿಗಳೇ! (ಗಂಭೀರ ಧ್ವನಿಯಿಂದ, ಕಣ್ಣುಗಳಲ್ಲಿ ನೀರುತುಂಬಿ, ಶೂನ್ಯ ದೃಷ್ಟಿಯಿಂದ) ಆ ಹುಡುಗೀನ ಒಂದು ದಿನವಾದರೂ

ಕೈಯಿಂದ ಮುಟ್ಟಬೇಕೂನ್ನೋ ದುರಾಲೋಚನೆಯಿಂದ ಹಾಗೆಮಾಡಿದೆ.

**ನಂಜ**— ಅಂಗಾರೆ, ನಡುರಾತ್ರೇನಾಗ ನನ್ನ ಮನೇ ಮುಂದೆ, " ಲೋ ನಂಜಾ ! ಸಾವಿರರೂಪಾಯಿ ! ದಗಾ ! ದಗಾಂ !"ಂತ ಕೂಗ್ತಾ ಸುಳಿದಾಡುತಾ ಇದ್ದೋರು ನೀವೇಯಾ ?

**ರಂಗ**— ಹೌದಪ್ಪಾ ! ನಿನ್ನಿಂದ ೨೫ ರೂಪಾಯಿ ಕಸುಗೊಳ್ಳೋ ಕ್ಕೋಸ್ಕರ ಹಾಗೆ ಮಾಡಿದೆ

**ನಂಜ**— ಅಯ್ಯೋ! ನಿನ್ನ ರೂಪಾಯಿಮನೇ ಆಳಾಯ್ತು, ನನ್ನೆಂಡರ್ರು ನೆಗೆದುಬಿದ್ದೋಗುತಾ ಇದ್ದಳೇ !

**ಶಾಸ್ತ್ರಿ**— ನಂಜಯ್ಯಾ ! ಈ ಸಂದರ್ಭದಲ್ಲಿ ನೀನು ಯಾವ ಮಾತನ್ನೂ ಆಡಬಾರದು. ಮನಸ್ಸನ್ನ ಸಮಾಧಾನಕ್ಕೆ ತಂದುಕೋ

**ನಂಜ**— ನಾನೀಗಲೇ ಓಗಿ ಬಸವಯ್ಯನಿಗೂ, ಶಾಮಣ್ಣೋರಿಗೂ ಈ ಸುದ್ದಿ ತಿಳುಸ್ತೀನಿ—(ತ್ವರೆಯಿಂದ ಹೋಗುವನು)

**ರಂಗ**—( ಕಣ್ಣುಗಳನ್ನೊರಸಿಕೊಂಡು, ಶಾಸ್ತ್ರಿಯ ಕೈಹಿಡಿದು) ನೀವು ಈಗ ನನ್ನ ಕೈಬಿಟ್ಟರೆ ನನ್ನಾಸೆ ತೀರಿದಹಾಗೆ

**ಶಾಸ್ತ್ರಿ**—( ಸಮಾಧಾನಪಡಿಸುತ್ತಾ ) ನನ್ನಿಂದೇನಾಗಬೇಕು ರಾಯರೇ ?

**ರಂಗ**— ನೀವೇನಾದರೂ ಮಾಡಿ ಗುರುದತ್ತವಾದ ಆ ಉಂಗುರಾನ ತರಿಸಿಕೊಟ್ಟರೆ ನಾನು ಉಳಿದುಕೊಳ್ಳುತೇನೆ

**ಶಾಸ್ತ್ರಿ**—(ಯೋಚಿಸಿ) ಉಂಗುರವೇನೋ ಆ ಮಗೂಬಳಿ ಸುರಕ್ಷಿತ ವಾಗಿದೆ. ಆದರೆ ಅದನ್ನ ಅವಳ ಕೈಯಿಂದ ತಗೊಬೇಕಾದರೆ ನೀವು ...

**ರಂಗ**— ಏನುಬೇಕಾದರೂ ಮಾಡುತೇನೆ ಸ್ವಾಮಿ !

**ಶಾಸ್ತ್ರಿ**— ಸತ್ಯವೇ ?

**ರಂಗ**— ಸತ್ಯವಾಗಿಯೂ ಸ್ವಾಮಿ !

**ಶಾಸ್ತ್ರಿ**— ಮೊದಲನೇದು ಶಾಮಣ್ಣನ ಸಂಬಳ ಹಿಡೀತಿರೋದನ್ನ ನಿಲ್ಲಿಸಿ, ಅವನ ಸಂಬಳ ಅವನ ಕೈಗೆ ಪೂರ್ತಿಯಾಗಿ ಬರೋಹಾಗೆ ಮಾಡ ಬೇಕು.

**ರಂಗ**— ಅಗತ್ಯವಾಗಿ.

**ಶಾಸ್ತ್ರಿ**— ಎರಡನೇದು—ಆ ಹುಡುಗೀ ಕಾಲಿಗೆ ಬಿದ್ದು ನೀವು ನಡೆಸಿರೋ ಅತ್ಯಾಚಾರಕ್ಕಾಗಿ ಕ್ಷಮಾಪಣೆ ಬೇಡಬೇಕು

**ರಂಗ**— ಸಾವಿರಸಲ ಬೇಕಾದರೂ ಬೇಡಿಕೊಳ್ಳುತೇನೆ

**ಶಾಸ್ತ್ರಿ**— ಈಗ ಆ ಹುಡುಗೀನ ನಾಳೆಯೇ ಊರಿನಿಂದ ಕರೆಸಿಬಿಡಬೇಕು ಆದಕ್ಕೆ ನಂಜಯ್ಯ ಈಗಲೇ ಹೊರಟರೆ ಬಸ್ಸು ಸಿಗುತ್ತೆ ನಾಳೆ ಬೆಳಿಗ್ಗೆ ಅಲ್ಲಿಂದ ಹೊರಟು ಬಂದುಬಿಡಬಹುದು.

**ರಂಗ**— ಹೌದೂ ಹೌದೂ! ಅದನ್ನ–ಆಗುರುದತ್ತವಾದ ಉಂಗುರಾನ ಒಂದುಸಾರಿ ನೋಡಿಬಿಟ್ಟರೆ ನನ್ನ ಕಷ್ಟಗಳೆಲ್ಲಾ ನಿವಾರಣೆಯಾಗುತ್ತವೆ

**ಶಾಸ್ತ್ರಿ**— ಅದಕ್ಕೊಂದೆರಡು ರೂಪಾಯಾದರೂ ಬೇಕಾಗುತ್ತಲ್ಲ!

**ರಂಗ**— (ಹಾಸಿಗೆ ಕೆಳಗಿನಿಂದ ಒಂದು ಹತ್ತುರೂಪಾಯಿ ನೋಟನ್ನು ತೆಗೆದು) ನೋಡೀ ಸ್ವಾಮಿ! ಇದೇ ಕೊನೆಯದಾಗಿ ನನ್ನ ಬಳಿ ಉಳಿದಿರುವ ನನ್ನ ಆಸ್ತಿ ಅದೂ (ಮೆಲ್ಲಗೆ) ಯಾರದ್ದೋ ಪ್ರೀಮಿಯಂ ಹಣ ಹದಿನೈದು ದಿವಸದ ಹಿಂದೇನೇ ಹೆಡ್ಡಾಫೀಸಿಗೆ ಕಟ್ಟಬೇಕಾಗಿತ್ತು. ಆದರೂ, ಶಾಸ್ತ್ರಿಗಳೇ! ಆ ಉಂಗುರ ನನ್ನ ಕೈಗೆ ಬಂದುಬಿಟ್ಟರೆ ಅದರ ಬಲಿಯದಿಂದ ಪುನಃ ನನ್ನ ಬಿಸಿನೆಸ್ಸು ಸ್ಟಾರ್ಟ್‌ಮಾಡಿ ಇದೇ ಊರಿನಲ್ಲೇ ನಿಮ್ಮಗಳೆದುರಿಗೇನೆ ಧರ್ಮವಾಗಿ ಬಾಳುತೀನಿ (ಕೊಡುವನು)

**ಶಾಸ್ತ್ರಿ**— (ತೆಗೆದುಕೊಂಡು) ಹಾಗಾದರೆ ನಾನೀಗಲೇ ಹೋಗುತೇನೆ ನಂಜಯ್ಯ ಶಾಮಣ್ಣನ ಹತ್ತಿರಕ್ಕೆ ಹೋಗುತೀನೀಂತ ಹೋದ ಅವನ್ನ ಕಂಡು ಬೇಗ ಬಸ್ಸಿಗಟ್ಟಿಬಿಡುತೇನೆ. (ಎದ್ದು) ಇನ್ನೊಂದು ಘಂಟೇಹೊತ್ತಿಗೆ ಗಂಜಿ ಕಾಯಿಸಿಕೊಂಡು ಬಂದು, ನಿಮ್ಮ ಬಳಿಯಲ್ಲೇ ಇರುತೇನೆ. ನೀವು ಮನಸ್ಸಿಗೇನೂ ವ್ಯಥೆಪಟ್ಟುಕೊಬೇಡಿ.

**ರಂಗ**— ನೀವೇ ನನ್ನ ಭಾಗದ ತಂದೆ—ದೇವರು (ಶಾಸ್ತ್ರಿಯ ಪಾದಗಳನ್ನು ಹಿಡಿದು ಕೊಳ್ಳುವನು ಅವನನ್ನು ಶಾಸ್ತ್ರಿಯು ಹಾಸಿಗೆಯಲ್ಲಿ ಮಲಗಿಸಿ ನಿಷ್ಕ್ರಮಿಸುವನು)

[ಇತ್ತಲಿಂದ ಸುಬ್ಬರಾಯಶಾಸ್ತ್ರಿಯು ಕೈಲಿ ಕವರೊಂದನ್ನು ಹಿಡಿದು ಪ್ರವೇಶಿಸುವನು.]

**ಸುಬ್ಬ**— ರಂಗಣ್ಣ! ನಿನಗೊಂದು ರಿಜಿಸ್ಟರ್ ಕಾಗದ ಬಂದಿದೆ. ನಿಮ್ಮ

ಕಂಪೆನಿ ಹೆಡ್ಡಾಫೀಸಿನಿಂದ. ಪೋಸ್ಟ್‌ಮ್ಯಾನ್ ಧನಕೋಟಿರಾಜೂಗೆ ಹೇಳಿ, ನಾನೇ ರುಜೂ ಮಾಡಿ ತಗೊಂಡು ಬಂದೆ. (ಕೊಡುವನು)

**ರಂಗ**—(ತೆಗೆದುಕೊಂಡು ಆತುರನಾಗಿ) ನೀನು ಹೋಗಿ ಡಾಕ್ಟರ್ ಭೂರ್ಷನನ್ನ ಕರೆದುಕೊಂಡು ಬಾ; ನನಗೇನೋ ಒಂದು ಬಗೆಯ ಸಂಕಟ ವಾಗುತಾ ಇದೆ.

**ಸುಬ್ಬ**—ಈಗಲೇ ಹೋಗಲೇ!

**ರಂಗ**—(ಕವರನ್ನು ಸರಸರನೆ ಒಡೆಯುತ್ತಾ) ಹೌದು. ಈಗಲೇ ಹೋಗು.

[ಸುಬ್ಬರಾಯ ಶಾಸ್ತ್ರಿಯು ಹೊರಟುಹೋಗುವನು]

**ರಂಗ**—(ಕಾಗದವನ್ನು ತೆರೆದು ಒದುತ್ತಾ ಓದುತ್ತಾ ಮಧ್ಯೆ ಗಂಟ ಲೊಣಗಿ ತಲೆ ಸುತ್ತಿದಂತಾಗುತ್ತದೆ)

Mr. Ranganatha Rao, hitherto the Agent of the company is hereby informed, that as the Board of Directors is in possession of proofs enough to show that he has deliberately and intentionally continued to deceive both the public and the Company, and as they feel that he is too ignoble for such a noble profession as the Life Insurance, his Agency is herewith cancelled and the same given the required publicity

D. P W. BROOMSTICK,
*By order of the Board of Directors*

[ಕಣ್ಣುಗಳು ಕೆಂಪಾಗುವುವು. ಸುತ್ತಲೂ ದುರದುರನೆ ನೋಡುವನು. ಮತ್ತೆ ಕಾಗದವನ್ನು ನೋಡುವನು. ನಿಧಾನವಾಗಿ ತಲೆಯನ್ನು ಪರಚಿಕೊಳ್ಳುತ್ತಾ ಹುಚ್ಚನಾಗುವನು.]

My Agency' my Agency (ನಗುವನು) . cancelled' .. too ignoble' (ರೇಗುವನು) My Agency! ... .. business' (ಗಟ್ಟಿಯಾಗಿ ನಗುವನು) D. P W. Broomstick .. ಬೋಳಿಮಗನೇ! (ರೇಗಿ ಮೇಜಿನ ಮೇಲಿನ ಔಷಧದ ಶೀಷೆಯನ್ನೇ ದುರದುರನೆ ನೋಡುತ್ತಾ ಅದನ್ನೆತ್ತಿಕೊಂಡು ಹಲ್ಲನ್ನು ಕಡಿಯುತ್ತಾ) Broomstick '' (ನೆಲಕ್ಕಪ್ಪಳಿಸಿ) order' Board of Directors' .. ಹಹ್ಹಹ್ಹಾ' my Agency' ಅರ್ಜುನಸೆಟ್ಟಿ! (ತಲೆದಿಂಬಿನಡಿಯಲ್ಲಿದ್ದ ಪತ್ರಗಳನ್ನೆಲ್ಲಾ ಕಿತ್ತು ತೂರುತ್ತಾ) ನನ್ನ ಎಂಟೂವರೆಸಾವಿರ ರೂಪಾಯಿ! ನನ್ನುಂಗುರ! (ಎನ್ನುತ್ತಾ ತನ್ನ ಬಟ್ಟೆಯನ್ನು ಹರಿಯುತ್ತಾ ಹೊರಟುಹೋಗುವನು)

## ಅಂಕ ೨- ದೃಶ್ಯ ೫

[ಅಶ್ವತ್ಥಕಟ್ಟೆಯ ಪಕ್ಕ. ಬಸವಯ್ಯ, ಶಾಸ್ತ್ರಿ ಪ್ರವೇಶಿಸುವರು.]

**ಶಾಸ್ತ್ರಿ**— ನಂಜಯ್ಯನಿಗೆ ಬಸ್ಸು ಸಿಕ್ಕಿತು ತಾನೆ?

**ಬಸವ**— ಓಹೋ! ಇಷ್ಟೊತ್ತಿಗೆ ಪಾತವ್ವಾವರಿಗೆನಿಮ್ಮ ಕಾಗದಕೊಟ್ಟಿರಬೇಕು ಅವರಾಗಲೇ ಬೆಳಿಗ್ಗೆ ಬಂಡಾಕೆ ತಯಾರಿಮಾಡಿಕೋತಾ ಇರಬೋದು.

**ಶಾಸ್ತ್ರಿ**— ರಂಗನಾಥರಾಯಂದೇ ಆ ಉಂಗುರ ಅನ್ನೋದನ್ನ ಕೇಳಿ ಅವಳ ಮನಸ್ಸಿಗೆ ತುಂಬ ನೆಮ್ಮದಿಯಾಗಬಹುದು.

**ಬಸವ**— ಆದರೆ, ಈ ಚಂಡಾಲಮನಸ ಮಾಡಿದ ಕೆಲಸ ನೆನೆದು, ಜೀವ ಬಿಗೀ ಇಡಕೊಂಡು ತಿರುಗಿ ಬಂದಾರಾ ಬುದ್ದೀ?

**ಶಾಸ್ತ್ರಿ**—ಅದಕ್ಕೆ ಸಮಾಧಾನ ಎಲ್ಲಾ ಬರೆದಿದೀನಪ್ಪ. ಅವಳ ಕಾಲಿಗೆ ಬಿದ್ದು ಹತ್ತೂ ಜನದ ಮುಂದೆ ತಾನು ಮಾಡಿದ್ದನ್ನೊಪ್ಪಿಕೊಂಡರೇನೇ ಉಂಗುರ ಕೊಡೋದೂಂತ

**ಬಸವ**— ತಮಗೆ ಪಾತವ್ವ ಅವರ ಸೊಬಾವ ತಿಳೀದು ಬುದ್ದೀ! ಜೀವ ಓದರೂ ಸರಿ, ಅತ್ತೂ ಜನದಮುಂದೆ ನಿಂತಾರಾ?—ಅದೂ ಈವಯ್ಯ ಮಾಡಿದ ಅನ್ಯಾಯದ ಸುದ್ದೀ ಸಾರಾಕೇ!!

**ಶಾಸ್ತ್ರಿ**—"ರಂಗನಾಥರಾಯನೇ ಪ್ರೇತವಾಗಿದ್ದ ನಿನ್ನ ಮಾತೇ ಸತ್ಯವಾಯಿತು. ನಿಮ್ಮ ತಂದೇ ಹೆಸರಿನಮೇಲೆ ಬಂದಿದ್ದ ಅನ್ಯಾಯದ ಕೆಟ್ಟ ಹೆಸರು ತೊಡೆದುಹೋಯಿತೂ"ಂತ ಬರೆದಿರೋದನ್ನ ಓದಿ ಅವಳ ಮನಸ್ಸಿಗೂ ಸುಬ್ಬಮ್ಮನ ಮನಸ್ಸಿಗೂ ತುಂಬಾ ಆನಂದವಾಗಿರಬಹುದು

**ಬಸವ**—ಪಾತವ್ವನ ಮನಸ್ಸಿಗೇನೋ ಬೋಎತೇನೇ ಆಗಬವುದು.

**ಶಾಸ್ತ್ರಿ**—ನಾನೇನೋ ಎಲ್ಲಾ ಬರೆದಿದೀನಿ "ನಿಮ್ಮ ತಂದೇ ಮಾತು ಮೀರಿ, ಶಾಮಣ್ಣನ್ನ ಸಾಲದಲ್ಲಿ ಮುಳುಗಿಸಿದವನು ನಾನು, ನನ್ನ ತಪ್ಪುಗಳಿಗೆಲ್ಲಾ ನಾನು ಪ್ರಾಯಶ್ಚಿತ್ತ ಮಾಡಿಕೊಳ್ಳುತೇನೆ ನೀನು ನಾಳೆ ಬೆಳಿಗ್ಗೆ ಹೊರಟುಬಾರದಿದ್ದರೆ ಇಲ್ಲಿ ತಲೆಗಳು ಬಿದ್ದು ಹೋಗುತ್ವೇ"ಂತ—(ಯೋಚಿಸುವನು)

**ಬಸವ**—ದೇವರಂತ ತಾಯಿ ಬೋ ದೊಡ್ಡ ಮನಸ್ಸು ಏನೂ ಅನುಮಾನ ಇಲ್ಲದಂಗೆ ನಾಳೆ ಅನ್ಕೆರಡು ಗಂಟೇಗೆ ಮನೇಮುಂದೆ ಇಳಿದುಬಿಡುತಾರೆ ಬಿಡೀ ಬುದ್ದೀ

**ಶಾಸ್ತ್ರಿ**—ನೀನು ಸ್ವಲ್ಪ ಖುಷಿಯಾಗಿರಲ್ವೇ ?

**ಬಸವ**—ಯಾಕಾ ಬುದ್ದೀ ?

**ಶಾಸ್ತ್ರಿ**—ನಿನ್ನ ಹೆಂಡತಿ ಬರುತಾಳೇಂತ

**ಬಸವ**—(ನಕ್ಕು) ಕುಸೀನೇ ಅಲ್ವಾ ಬುದ್ದೀ! (ತಟ್ಟನೆ ಚಿಂತಾಕ್ರಾಂತನಾಗಿ) ಬುದ್ದೀ! ಮಧ್ಯಾನ ನೀವು ಶಾಮಣ್ಣೋರಿಗೇಳಿದಿರಲ್ಲ, ನಿನ್ನ ಸಾಬಳದಿಂದ ಸಾಲಕ್ಕ ಕಟ್ಟೋದು ನಿಂತೋದಂಗೆ, ಪತ್ರ ವಾಪಸು ಕೊಡಿಸುತೀನೀಂತ, ಆಗ ಮಕದಮೇಗೆರವಷ್ಟೂ ಕೂಡ ಸಂತೋಷ ಕಾಣಲಿಲ್ಲ ಬುದ್ದೀ!

**ಶಾಸ್ತ್ರಿ**—ನನಗೂ ಅದೇ ತುಂಬಾ ಯೋಚನೆಯಾಗಿದೆ. ಅಂತೂ ಆ ಹದಿನೈದು ರೂಪಾಯಿ ವಿಚಾರದಲ್ಲಿ ನಾವೇನಾದರೂ ಮಾಡಿ ಸೂಕ್ಷ್ಮ ತಿಳಿಕೋಬೇಕು

**ಬಸವ**—ನನಗೇನೋ ಒಂದೇ ಸೂಕ್ಷ್ಮ ಒಳೀತೈತೆ.

**ಶಾಸ್ತ್ರಿ**—ಏನು ಹೇಳು ?

**ಬಸವ**—ರತ್ನಮ್ಮನ ಚಾಡೀತನ ತಡೀಲಾರದೆ ಶಾಮಣ್ಣೋರು

ಕಡೇಗೆ ಕಲ್ಲುಮನಸ್ಸು ಮಾಡಿ ಸೊಸೈಟಿ ಒಳಿಗೇನೆ ... ...

**ಶಾಸ್ತ್ರಿ**— ತಗೊಂಡುಬಿಟ್ಟಿದಾನೇಂತಲೇ ?

**ಬಸವ**—(ಚಿಂತೆಯಿಂದ) ಔದು ಬುದ್ದೀ! ಸೆಕ್ಟೇರಿ ಮನೆಯಿಂದ ಬೀಗದಕೈ ತಂದು ಕೊಟ್ಟಾಗ, ಅವರಂದ ಸೊಟ್ಟಮಾತೂ, ಪಟ್ಟನುಮಾನ ಎಲ್ಲಾ ಏಳಿದ್ದಕ್ಕೆ, "ನಾಜ ಬಸವಯ್ಯ, ಯಾಕಾಗಬಾರದು? ನಾನು ಬಡವ; ಕೈಯಾಗೆ ಬೀಗದಕೈ; ಎದುರುಗಡೆ ರೂಪಾಯಿ ಪೆಟ್ಟಿಗೆ ಅವರಂದಿದ್ದು ಸಾಜಾನೇ"ಂತ ಏಳುತಾ ಇದ್ದರು. ಕಡೇಗೆ ನಾನು "ತಾಸೀಲ್ದಾರ್ ಕಿಟ್ಟಪ್ಪ ನೋರ ವಂಶದಿಚಾರದಾಗೆ ಅಂಗಂದರೆ ಅವರ ನಾಲಗೇ"ಂತ ಬೈದೆ. ಆಗ "ನೀನು ಮೇನೇಜರ ಮನೇಗೋಗಿ ಕಾಯಿಲೆ ಎಂಗೈತೆ ತಿಳಕೊಂಡು ಬಾ"ಂದರು ಓಗಿಬಂದು "ಜರ ಜಾಸ್ತಿಯಾಗೈತೇ"ನ್ನುತ್ತಲೂ ಮಕ ಅರಳ್ತು ಊಟ ಮಾಡಿಕೊಂಡ. ಒಂಬತ್ತು ಗಂಟೇಗೆ ಬೀಗದೆಸಲು ತಗೊಂಡೋದರು ಈವತ್ತು ಒತ್ತೀನೇ ಬತ್ತಾ ಅದಿನೈದು ರೂಪಾಯಿ ತಂದುಕೊಟ್ಟು "ರತ್ನ! ನೀನು ಅದ್‌ವೈರ್ಯವಾಗಿ ಅಬ್ಬ ಮಾಡು" ಅಂದ್ರು. ಕಣ್ಣುಗೋಳೆರಡೂ ಕೆಂಪಗಾಗಿದ್ದೋ. ಈವತ್ತಂತೂ ರಜಕ್ಕೆ ಬರೆದುಬಿಟ್ಟವರೆ, ನಾಳೆ ಓತ್ತೀನೆ ಸೊಸೈಟಿ ಒಂದು ಗಂಟೇ ಮಾತ್ರ ತೆಗೀತಾರಂತೆ ಅದಕ್ಕೂ "ಬರಾಕಾಗಾ ಕಿಲ್ಲ, ಮೈಯಾಗೆ ಚೆಂದಾಕಿಲ್ಲ" ಅಂತ ಏಳಿ ಕಾಗದ ಬರಕೊಟ್ಟರು. ತಗೊಂಡೋಗಿ ಕೊಟ್ಟುಬಿಟ್ಟು ಬಂದೆ ಈಗ.

**ಶಾಸ್ತ್ರಿ**— ಆಂ!! (ಚಿಂತೆಯಿಂದ) ಈಗೆಲ್ಲಿದಾನೆ?

**ಬಸವ**— ಮನ್ಯಾಗೇನೇ ಮನಗಿದ್ದರು.

**ಶಾಸ್ತ್ರಿ**—(ಗಾಬರಿ ಚಿಂತೆಗಳಿಂದ) ಇದೇನಪ್ಪಾ! ತುಂಬಾ ಭಯವಾಗೋ ಸಮಾಚಾರವಾಗಿದೆ. ಏನ್ಮಾಡೋದು! ನಾಳೆ ಇದು ಗೊತ್ತಾಗಿ, ಅವರು ಮನೇಹತ್ತಿರಕ್ಕೆ ಪೋಲೀಸಿನವರನ್ನ ಕಳುಹಿಸಿದರೇನು ಗತಿ! ಈ ಹುಡುಗೀ ಗೌರೀಹಬ್ಬ ಮಾಡೋಕೆ ಗಂಡನ್ನ ಮಾನಾಹೋಗೋ ಸ್ಥಿತೀಗೆ ತರೋದೆ. ಇದೇನು ಪ್ರತಾಪ್ಪ ಇದೂ!!

**ಬಸವ**— ತಾವೇ ಏಳಿದಿರಲ್ಲಾ ಬುದ್ದೀ ನೆನ್ನೆ ರಾತ್ರಿ—ಏನು ತಪ್ಪಿ

ದರೂ ರತ ತಪ್ಪಕೂಡದೂಂತ.

**ಶಾಸ್ತ್ರಿ**—ಅಯ್ಯೋ! ನಾನು ಆ ಹುಡುಗೀಗೆ "ಅವರಪ್ಪನ ಮನೆ ಅರಿಶಿನ ಕುಂಕುಮ ಬರೋದಕ್ಕಿರೋ ಅಡ್ಡಿ ಹೋಗಲೀ"ಂತ ಹೇಳಿದೆನೇ ಹೊರತೂ, ಹೀಗಾಗುತ್ತೇಂತ ಗೊತ್ತಿದ್ದರೆ "ದಿನಾ ಎದ್ದೇಟಿಗೆ ಗಂಡನ ಕಾಲಿಗೆ ನಮಸ್ಕಾರ ಮಾಡಿದರೆ ಸಾವಿರ ಗೌರೀಪೂಜೆ ಮಾಡಿದ ಫಲ ಸಿಕ್ಕುತ್ತೇ"ಂತ ಹೇಳುತ್ತಿದ್ದ ಈಗೇನು ಮಾಡೋದು ? ದಿಕ್ಕು ತೋರದದಹಾಗಾಗಿದೆಯಲ್ಲಾ !! (ಕಳವಳ)

**ಬಸವ**—ತಾವೇ ಎಂಗಾರಾ ಮಾಡಿ, ಅದಿನೈದು ರೂಪಾಯಿ ಜೊತೆ ಮಾಡಿ ತಂದು, ಶಾಮಣ್ಣೋರ ಕಯ್ಯಾಗೆ ಮಡಗಿಬಿಟ್ಟರೆ, ಅಂಗೇನಾದರೂ ಆಗಿದ್ದರೆ ರಾತ್ರೇಗೆ ಸರಿಮಾಡಿಬಿಡಬವುದು.

**ಶಾಸ್ತ್ರಿ**—ನನಗೆ ಹದಿನೈದು ರೂಪಾಯಿ ಯಾರಪ್ಪ ಕೊಡೋರು, ಈ ಊರಿನಲ್ಲಿ. ಹೀಗೇಂತ ಗೊತ್ತಿದ್ದಿದ್ದರೆ, ರಂಗನಾಥರಾಯನ ಹತ್ತು ರೂಪಾಯನ್ನೂ ನಿಲ್ಲಿಸಿಕೊಂಡುಬಿಟ್ಟು ನಂಜಯ್ಯನ್ನ ನಡಕೊಂಡು ಹೋಗೂಂತ ಅಂದುಬಿಡಬಹುದಾಗಿತ್ತು ಆ ಬ್ರಾಹ್ಮಣನ ಹತ್ತಿರಲೂ ಒಂದು ಕಾಸಿಲ್ಲ (ಭಯ ಸಂತಾಪಗಳಿಂದ ಯೋಚಿಸಿ) ಇರು! ರಂಗನಾಥರಾಯನ ಹತ್ತಿರ ಚೀಟಿ ತಗೊಂಡು, ಆ ಡಾಕ್ಟರು-ಅವನ ಸ್ನೇಹಿತ ಭೂರ್ಷ ಅವರ ಹತ್ತಿರವಾದರೂ ಹೋಗಿಬಿಟ್ಟು ಬರುತೇನೆ ನೋಡೋಣ. ಆದರ ನನಗೇನಾದರೂ ರಾತ್ರೀಗೆ ದುಡ್ಡು ಸಿಕ್ಕದೇಹೋದರೂ, ನಾಳೆ ಮಧ್ಯಾನ್ಹದೊಳಗೇ ಪೂಜೆಯಿಂದ ಏನಿಲ್ಲಾ ಅಂದರೂ ಒಂದು ಹತ್ತು ರೂಪಾಯಿ ಜೊತ ಮಾಡುತೀನೀ ಆದರೂ ...ಬಸವಯ್ಯಾ! ಈ ಮಧ್ಯೆ ಶಾಮಣ್ಣನ್ನ ಒಂದು ಕ್ಷಣಕೂಡ ಬಿಟ್ಟು ಕದಲಬೇಡಾ! ಮಾನಿಷ್ಠ! ನಮ್ಮನುಮಾನವೇ ನಿಶ್ಚಯ್ಯವಾದರೆ, ಅವನು ಸಮಯ ನೋಡಿ ಪ್ರಾಣಬಿಡೋಕೂ ಹಿಂತೆಗೀಲಾರ

**ಬಸವ**—(ಬೆದರಿ) ನನಗೊಳೀಲೇ ಇಲ್ಲವಲ್ಲ ಬುದ್ದೀ ಇದು. ಅಂಗಾರೆ ಓಡುತೀನಿ.

**ಶಾಸ್ತ್ರಿ**—ರಾತ್ರಿಗೆ ನಾನು ಬರದಿದ್ದರೆ, ರತ್ನಮ್ಮನಿಗೆ ಹೇಳಿಬಿಡು ಬೆಳಿಗ್ಗೆ ಎಂಟು ಗಂಟೆಯೊಳಗೆ ಪೂಜೆ ಮುಗಿಸಿಬಿಡಬೇಕಂತೆ. ಅದಕ್ಕ ಮುಂಚೇನೆ ಎಲ್ಲಾ ಅಣಿಮಾಡಿಕೊಂಡು, ಗೌರೀ ಗುಡೀಲಿ ಮೊದಲು ವ್ರತ

ಮಾಡಿಕೊಂಡು ಬಂದು, ಆಮೇಲೆ ಮನೇಲಿ ಪೂಜೆ ಮಾಡ್ಕೋಬೇಕಂತೇಂತ ಹೇಳಿಬಿಡು.

**ಬಸವ**—ಆಗಲೀ ಬುದ್ಧೀ—ತಾವೇ ಏನಾದ್ರೂ ಮಾಡಿ ಬೇಗ ತರ ದೂದು ನಡೆಸಬೇಕು ಬುದ್ಧೀ ಅಣಕ್ಕೆ....(ತ್ವರೆಯಿಂದ ನಿಷ್ಕ್ರಮಣ ಶಾಸ್ತ್ರಿ ಚಿಂತಿಸುತ್ತ ಹೊರಡುವನು )

## ಅಂಕ ೨—ದೃಶ್ಯ ೬

[ಶಾಣ್ಣನ ಮನೆಯ ಕೈಸಾಲೆ. ಮುರುಕು ಮಂಚದಮೇಲೆ ಶಾಮಣ್ಣನು ಕಳ ವಳದಿಂದ ಕುದಿಯುತ್ತಾ ಕುಳಿತಿರುವನು—ಮಧ್ಯಾಹ್ನ.)

**ಶಾಮು**—(ಬಾಗಿಲಕಡೆ ನೋಡಿ, ನಿಧಾನವಾಗಿ) ಜೀವದ ಪಣ ಇಟ್ಟು ಮಾಂಗಲ್ಯಶ್ರೀಯೋಭಿವೃದ್ಧಿಗಾಗಿ ಮಾಡಬೇಕಾದ ವ್ರತ ಸಾಂಗವಾಗಿ ನೆರ ವೇರೋದಕ್ಕೆ ಸಹಾಯ ಮಾಡಿದ ಹಾಗಾಯಿತು ಇನ್ನುಮುಂದೆ ಬಡತನ ವಾದರೂ ಮಾನದಿಂದ ಬಾಳಿದ ತಂದೆ, ಮಹಾರಾಜರಿಂದ ಮನ್ನಣೆ ಪಡೆ ದಿದ್ದ ತಾತ, ಇವರ ಕೀರ್ತಿಯುಕ್ತವಂಶಕ್ಕೆ ಕಳಂಕ ತಂದು ಜೀವಿಸಿರುವ ಬದಲು, ಪಾಪವು ಬಯಲಾಗುವ ಮುಂಚೆಯೇ ಈ ಸಂಕಟಗಳ ಶರಪಜರ ದಿಂದ ಮುಕ್ತನಾಗ ಬೇಕಾದುದೊಂದೇ. (ಜೇಬಿನಿಂದ ಪೊಟ್ಟಣವನ್ನು ತೆಗೆದು ಕಣ್ಣಿಗೊತ್ತಿಕೊಂಡು, ಬಿಚ್ಚಿ ಅದನ್ನೇ ನೋಡುವನು. ಕೈ ನಡುಗು ವುದು) ಇದನ್ನು ಸೇವಿಸಿದ ಮರುಕ್ಷಣವೇ ಇಷ್ಟು ದೊಡ್ಡ ಪ್ರಪಂಚವೂ ಶೂನ್ಯವಾಗಿಬಿಡುವುದು, ನಾನು ಗಾಢಾಂಧಕೂಪಕ್ಕೆ ಜಾರಿಬಿಡುತೇನೆ.... ... ಆಂ? ತನ್ನ ಪಂಚಪ್ರಾಣಗಳಿಗಿಂತಲೂ ಹೆಚ್ಚೆಂದು ಪ್ರೀತಿಸುವ ಪಾತು ನನ್ನನ್ನ ನೋಡಬೇಕೂಂತ ನಾಲ್ಕಾರು ತಿಂಗಳಿಂದ ಕುದಿಯುತ್ತಿದ್ದು ಈಗ ಆತುರ ಳಾಗಿ ಓಡಿಬರುತ್ತಿರುವಾಗ, ಆ ಮಾತೃಪ್ರೇಮವನ್ನ ವಂಚಿಸಿ ಸತ್ತುಬಿಡಲೇ?

ಇಲ್ಲ! ಇಲ್ಲ' ನನ್ನ ಮಾನ ಹೋದರೂ ಸರಿ, ಪುನಃ ಸಂಪಾದಿಸಬಹುದು (ಪೊಟ್ನವನ್ನು ಮುಚ್ಚುವನು—ಬಾಗಿಲಕಡೆ ನೋಡುವನು.)....ಏನು ? ಸ್ವಾರ್ಥದಿಂದ ಸಾಯಲಾರದೆ, ಹೇಡಿಯಾಗಿ ಕೂತರೆ, ಮುಂದೆ ನನ್ನ ಮಾನವೇ ಅಲ್ಲ, ಮನೆಯ—ವಂಶದ ಗೌರವವೇ ಹಾಳಾಗಿ, ನನ್ನ ಹಣೆಯ ಮೇಲೆ "ಕಳ್ಳ"ನೆಂದು ಬರೆ ಎಳೆಯುವರು ಇದನ್ನ ನೋಡಿ ಪಾತು—ಅಮ್ಮ

ನೆವರು ಜೀವ ಬಿಗಿಹಿಡಿದು ಬದುಕಿರುತಾರೆಯೋ ?... ಇಲ್ಲ! ನನಗಿನ್ನು ಬದು ಕಿರಲು ಹಕ್ಕಿಲ್ಲ ನನ್ನ ಕೆಲಸಗಳೆಲ್ಲಾ ಮುಗಿದುವು. ಇನ್ನು ಮುಂದೆ ನನ್ನ ಜೀವನದ ಪಥದಲ್ಲಿ ಅಖಂಡವಾದ, ಅನಂತವಾದ ಅಂಧಕಾರ ಕೂಪವೇ ಹೊರತು ಮತ್ತೆ ಬೇರೆ ಇಲ್ಲ! ಇಲ್ಲ!! ಇಂಥ ಸುಸಮಯವು ಇನ್ನು ಸಿಗ ಲಾರದು ಮನೆಯಲ್ಲಿ ಯಾರೂ ಇಲ್ಲ. ಪುಣ್ಯವಶಾತ್ ಬಸವಯ್ಯನೂ ಅನುಮಾನಿಸದೆ ಹೊರಗಡೆ ಕೂತಿದಾನೆ. ದೇವರೇ ಈ ರೀತಿ ನನ್ನ ಮುಕ್ತಿಗೆ ಅನುಕೂಲ ಪಡಿಸಿದಾನೆ.

**ಬಸವ**—(ಪ್ರವೇಶಿಸಿ) ಬುದ್ದೀ !

**ಶಾಮ**—(ಪೊಟ್ಟಣವನ್ನು ತಟ್ಟನೆ ಮುಚ್ಚಿಟ್ಟು ಕೊಂಡು) ಏನು ಬಸವಯ್ಯ? (ಧ್ವನಿ ನಡುಗುವುದು.)

**ಬಸವ**— ಚಿಕ್ಕವ್ವಾವರೂ ಶಾಸ್ತ್ರಿಗೋಳೂ ಆಸ್ಪತ್ರೆ ಚೌಕದತಾವ ಬರುತಾ ಅವರೆ ಗಂಟು, ಮರದಜೊತೆ ಎತ್ತಿಕೊಂಡು ನಾನೋಗಿ ತಗೊಂಡು ಒತ್ತೀನಿ

**ಶಾಮ**— (ಬೆಚ್ಚಿ) ಹೋಗು! ಬೇಗ ಹೋಗು!

(ಬಸವಯ್ಯನ ನಿಷ್ಕ್ರಮಣ)

**ಶಾಮ**—(ಎದ್ದು) ಇನ್ನು ಅವಕಾಶವಿಲ್ಲ. (ಪೊಟ್ಟಣವನ್ನು ಬಿಚ್ಚಿ ದುರದುರನೆ ನೋಡುವನು. ಕಣ್ಣುಗಳಲ್ಲಿ ನೀರು ತುಂಬುವುದು ) ಏನೂ? ನನ್ನ ಮುದ್ದು ರತ್ನ, ಹಸುಗೂಸಿನ ಹೃದಯದ ನನ್ನ ರತ್ನ—(ತುಟಿಗಳು ಅದುರುವುವು) ಪವಿತ್ರವಾದ ತನ್ನ ಮಾಂಗಲ್ಯವ್ರತವನ್ನ ಪೂರಯಿಸಿಕೊಂಡು' ಮಂಗಳಸ್ವರೂಪಳಾಗಿ (ಧ್ವನಿ ಕಂಪಿಸುವುದು) ಪ್ರಸನ್ನಳಾಗಿ ಬರುವ ವೇಳೆಗೆ, ಆ ನನ್ನ ಸಿರಿದೇವಿಯ ಕೋಮಲ ಹೃದಯವನ್ನ ಕರಾರಿಯಿಂದಿರಿದು, ನಾನು ಸಾಯಲೇ! ಇಲ್ಲ! ಇಲ್ಲ! ನಾನು ಸಾಯಲಾರೆ! ......(ಗದ್ಗತಿತನಾಗಿ, ಕ್ಷಣ ಕಾಲ ಬಾಗಿಲಕಡೆ ಪ್ರತೀಕ್ಷಾ ದೃಷ್ಟಿಯಿಂದ ನೋಡಿ) . ..(ಕಣ್ಣುಗಳು ಕೆಂಪೇರಿ)ಆಗದಿದ್ದರೆ ಮುಂದಿನ ಅನರ್ಥಗಳು .... ಪೋಲೀಸು ...ಅಪಮಾನ ... ಕೋರ್ಟು....(ಕಣ್ಣುಗಳರಳಿ ಧ್ವನಿ ಭಾರವಾಗಿ) ಜೈಲು !....ದುರ್ಮರಣ!! ಕ್ರಂದನ ಧ್ವನಿಯಾಗಿ) ಇಲ್ಲ! ಇಲ್ಲ! ಎಂದಿಗೂ ಇಲ್ಲ! .......ಇನ್ನು ತಡಮಾಡ

ಬಾರದು (ಪೊಟ್ಟಣವನ್ನು ಹತ್ತಿರತೆಗೆದುಕೊಳ್ಳುವನು. ಕೈಗಳದುರಿ ಕಣ್ಣೀರು ಉಕ್ಕಿ ಬರುವುದು) ಅಯ್ಯೋ! ಸಾಯಲಾರೆನಲ್ಲಾ! ರತ್ನ! ಪ್ರೇಮಮೂರ್ತಿ! ದೇವೀ! ...... (ಬಾಯನ್ನು ಮುಚ್ಚಿಕೊಂಡು ಚಪಲ ದೃಷ್ಟಿಯಿಂದ ಬಾಗಿಲ ಕಡೆ ನೋಡಿ, ಮೆಲ್ಲನಿಯಲ್ಲಿ) ...ಇಲ್ಲ! ನೀನು ಬರುವವರೆಗೂ ಬದುಕಿರುವೆ ನೀನು ಬಂದಮೇಲೆ ನಿನ್ನಮುಖದಲ್ಲಿಆನಂದದ ಅಲೆಗಳನ್ನು ನೋಡಿದಮೇಲೆ — "ರತ್ನ! ನಿನ್ನ ವ್ರತ ನಂಗವಾಗಿ ನೆರವೇರಿತೇ?" ಎಂದು ಕೇಳುತೇನೆ ನೀನು ನಿನ್ನ ಅಮೃತವಾಣಿಯಲ್ಲಿ ತೃಪ್ತಿ ಸಂತೋಷದಿಂದ "ನೆರೆವೇರಿತು." ಎಂದ ಕೂಡಲೇ "ಒಳಗೆಹೋಗಿ, ಒಂದು ಲೋಟ ನೀರು ತೆಗೆದುಕೊಂಡು ಬಾ" ಎಂದು ಹೇಳಿ, ನೀನು ನೀರು ತೆಗೆದುಕೊಂಡು ಬಾಗಿಲಬಳಿಗೆ ಬರುವವೇಳೆಗೆ ನಾನು ಹೆಣವಾಗಿ ಬಿದ್ದಿರಬೇಕು ... .. ಹೌದು—(ಯೋಚಿಸಿ) ಆದರೆ ನೀನು ನನ್ನಬಳಿ ಕುಳಿತು ಮಾತನಾಡಿಸಿದಾಗ ನನ್ನ ಮನಸ್ಸು ಅಧೀನವಾಗಿಬಿಟ್ಟರೆ? ... (ತನ್ನೊಳಗೆ ತಾನೇ) ಶಾಮೂ! ನೀನು ಹೇಡಿ! ಹಡಿಹೇಡಿ! ಇಲ್ಲಪ್ಪ ನಾನು ಹೇಡಿಯಲ್ಲ! ಇದೋ ನೋಡು! (ಪೊಟ್ಟಣವನ್ನು ಬಿಚ್ಚಿ ಪುಡಿಯನ್ನು ಬಾಯಲ್ಲಿ ಹಾಕಿ ಕೊಳ್ಳುವನು. ಕ್ಷಣಕಾಲನಂತರ) ಏನಿದು ? ಸಂಕಟವು ಸಹಾ ಆಗುತ್ತಿಲ್ಲವಲ್ಲ! ಏನೋ ಮೋಸವಾಗಿದೆ! ಅಯ್ಯೋ! ಈಹಾಳು ಪ್ರಪಂಚ ದಲ್ಲಿ ನನಗೆ ಸಾಯಲು ಸಹಾ ಅಧಿಕಾರವಿಲ್ಲವೇ ? (ಹತ್ತಿರಿದ್ದ ಚೌಕವನ್ನು ಕುತ್ತಿಗೆಗೆ ಬಿಗಿದುಕೊಂಡು ಜೇರಿ, ಪ್ರಜ್ಞೆತಪ್ಪಿ ಮಂಚದಮೇಲೆ ಉರು ಳುವನು.)

[ಹೊರಗಡೆ ಬಾಗಿಲಬಳಿ]

**ಬಸವ**— ನಡುವ್ಯಾಗ್ಯೆತರಾ ಬುದ್ದೀ ಗಂಟೂ?

**ಶಾಸ್ತ್ರಿ**— ಹೂಂ ನೀನು ಬೇಗ ಹೋಗಿ ತಗೊಂಡು, ಬಾಗಿಲಬೀಗ ಭದ್ರವಾಗಿ ಹಾಕಿಕೊಂಡು ಬಂದುಬಿಡು.

[ಇತ್ತಕಡೆಯಿಂದ ಶಾಸ್ತ್ರಿ ಎರಡು ಮೊರದಜೊತೆ ತೆಗೆದುಕೊಂಡು, ರತ್ನಮ್ಮ ಅರಿಶಿನ ಕುಂಕುಮದ ತಟ್ಟೆ ಕೈಲಿ ಹಿಡಿದು ಪ್ರವೇಶಿಸುವರು. ಮಂಚದಬಳಿಗೆ ಬರುತ್ತಲೇ ರತ್ನಮ್ಮನ ಕೈಯಿಂದ ತಟ್ಟೆ ಜಾರುವುದು. ಓಡಿಹೋಗಿ ಗಾಬರಿ ಯಿಂದ ಶಾಮಣ್ಣನ ತಲೆಯನ್ನಪ್ಪಿ ಕಂಬನಿದುಂಬವಳು. ಶಾಸ್ತ್ರಿ ಮೊರದಜೊತೆ ಯನ್ನು ತಟ್ಟನೆ ಕೆಳಗಿಟ್ಟು, ಹತ್ತಿರ ಹೋಗಿ ಕೆಳಗೆ ಬಿದ್ದಿರುವ ಕಾಗದವನ್ನು ಕೈಗೆತೆಗೆದುಕೊಂಡು]

**ಶಾಸ್ತ್ರಿ**—ಏನಿದೂ? ನಾನು ಊಹಿಸಿದಂತೆಯೇ ಅಸಂಗತ ನಡೆದು ಹೋಗಿದೆಯೇ ?

**ರತ್ನ**—(ಬಿಕ್ಕುತ್ತಾ) ಏನು ಶಾಸ್ತ್ರಿಗಳೇ? ಬೇಗ ಹೇಳಿ? ಏನಾಯಿತು?

**ಶಾಸ್ತ್ರಿ**—(ದುಃಖದಿಂದ, ದಾರೀಲಿ ಬರುತಾ ಸೊಸೈಟಿಸೆಕ್ರೆಟರಿ ಮನೆಗೆ ಹೋಗಿರಲಿಲ್ಲವೇ ದುಡ್ಡು ಕೊಟ್ಟುಬಿಟ್ಟುಬರೋದಕ್ಕೆ, ಆ ಹಣ ನಿನ್ನ ಗಂಡ ನಿನ್ನ ಹಬ್ಬದ ಖರ್ಚಿಗೇಂತ ಸೊಸೈಟೀಲಿ ತಂದುಬಿಟ್ಟಿದ್ದು. ಈ ಅನುಮಾನ ಬಂದು ನಾನು ಬಸವಯ್ಯನಿಗೆ 'ಶಾಮೂನ ಒಂದು ಗಳಿಗೇಕೂಡ ಬಿಟ್ಟು ಕದಲಬ್ಯಾಡಾ'ಂತ ನಿನ್ನೆಯೇ ಹೇಳಿದ್ದೆ ಅಯ್ಯೋ! ಕೊನೆಗೂ ಹೀಗೆ ವಿಷ ನುಂಗಿ ಬಿಟ್ಟನೇ! (ಕಂಬನಿಮಿಡಿಯುವನು)

**ರತ್ನ**—(ಬಿಕ್ಕಿಬಿಕ್ಕಿ ಅಳುತ್ತಾ ಶಾಮಣ್ಣನ ಮುಖದ ಮೇಲೆ ಮುಖ ವಿಟ್ಟು) ಅಯ್ಯೋ! ಪವಿತ್ರವಾದ ಮಂಗಳ ಗೌರೀವ್ರತ ಮಾಡಿಕೊಂಡು ಮನೆಗೆ ಬರೋವೇಳೆಗೆ ನನ್ನ ನಿಜವಾದ ಮಾಂಗಲ್ಯಾನೇ ಕಳೆದುಕೊಳ್ಳೋ ಗತಿಯಾ ಯಿತಲ್ಲಾ!! ನಾನು ಪಾಪಿ! **"ರತ್ನ! ನಾನೇ ನಿನ್ನ ಮಾಂಗಲ್ಯ ಅಲ್ಲವೇ? ನೀನು ಮಾಡೋ ಪೂಜೆ ನನ್ನ ಶ್ರೇಯೋಭಿವೃದ್ಧಿಗಾಗಲ್ಲವೇ"**ಂತ ನೀವು ಹೇಳಿದ್ದು ಈ ಅರ್ಥದಲ್ಲೇ? ...ಏಳಿ! (ರೋದಿಸುತ್ತಾ) ಕಣ್ಣುಬಿಡಿ! ಇದೋ, ನಾನು ನಿಮ್ಮ ರತ್ನ ಕೂಗುತಿದೇನೆ! "ಪೂಜೆ ಮುಗಿಸಿಕೊಂಡು ಬಾ; ಒಂದು ಘಳಿಗೆ ಒಟ್ಟಿಗೆ ಕೂತು ಮಾತನಾಡೋಣಾ"ಂತ ಹೇಳಿದ್ದಿರಲ್ಲ. ಈಗ ನನ್ನ ಕೈಬಿಟ್ಟು ಬಿಟ್ಟು ಎಲ್ಲಿಗೆ ಹೊರಟು ಹೋದಿರಿ! ಕಣ್ಣು ಬಿಡಿ! ನನ್ನನ್ನ ನೋಡೀ !!(ಅಳುವಳು)

**ಶಾಸ್ತ್ರಿ**—(ಕೈಕಾಲು ಮುಟ್ಟಿ ಬೆಚ್ಚಗಿರುವುದನ್ನು ಕಂಡು, ಕುತ್ತಿಗೆಯ ಬಟ್ಟೆ ಬಿಚ್ಚಿ ಗಾಳಿ ಹಾಕುತ್ತಾ) ರತ್ನಮ್ಮಾ! ಆ ಲೋಟದ ನೀರು ತಗೋ! (ರತ್ನಮ್ಮನು ಮಂಚದ ಹತ್ತಿರಿದ್ದ ನೀರಿನ ಪಂಚಪಾತ್ರೆ ಕೊಡುವಳು–ಶಾಸ್ತ್ರಿ ಶಾಮಣ್ಣನ ನೆತ್ತಿಗೆ ನೀರು ತಟ್ಟುವನು.)

**ರತ್ನ**—ಅಯ್ಯೋ! ಶಾಸ್ತ್ರಿಗಳೇ! ನನ್ನ ಕೈಯಾರ ನನ್ನ ಪವಿತ್ರ ದೇವ ತೇನ ಕಳಕೊಂಡಂತಾಯಿತಲ್ಲಾ! ನನಗೆ ಮುಂದಿನ್ನೇನು ಗತಿ! ಅಯ್ಯೋ! (ಮುಖದ ಮೇಲೆ ಮುಖವಿಟ್ಟು ಬಿಕ್ಕುವಳು)—"ಪೂಜೆ ಮುಗಿಸಿಕೊಂಡು

ಬೇಗಬಾ ರತ್ನಾ! ಒಟ್ಟಿಗೆ ಕೂತು ಊಟ ಮಾಡೋಣ"ಂತ ಹೇಳಿ, ಈಗ ಹೀಗೆ ನನಗೆ ವಂಚನೆ ಮಾಡಿಬಿಟ್ಟರಾ? ಏಳಿ! ಕಣ್ಣುಬಿಡಿ!

[ಗಂಟನ್ನ ಹೊತ್ತುಕೊಂಡು ಬಸವಯ್ಯನ ಪ್ರವೇಶ]

**ಶಾಸ್ತ್ರಿ**— ಬಸವಯ್ಯಾ! ನಾನು ಸಾರಿಸಾರಿ ಹೇಳಿದರೂ ನೀನು ಅಜಾಗರೂಕತೆಯಿಂದ ಎಂಥಾಕೆಲಸ ಮಾಡಿದೆಯೋ! ಓಡಿಹೋಗಿ ಡಾಕ್ಟರ್ ಭೂರ್ಷರನ್ನ ಕರಕೊಂಡು ಬಾ— ಅವರೆಲ್ಲಿದ್ದರೂ ಸರಿ

**ಬಸವ**— (ಗಂಟನ್ನ ಕೆಳಗಿಟ್ಟು ಶಾಮಣ್ಣನಹತ್ತಿರಕ್ಕೆ ಹೋಗಿ ಮೂಗು ಬಾಯಿಬಳಿ ಕೈಯಿಟ್ಟು, ಉಸಿರಾಡುತ್ತಿರುವುದನ್ನು ಕಂಡು ಸಮಾಧಾನ ದಿಂದ) ಅಜಾರೂಕತೆ ಎನೂ ಇಲ್ಲ ಬಿಡೀ ಬುದ್ಧೀ! ರಾತ್ರಿಯೆಲ್ಲಾ ಅವರ ರೂಮನೊರಗಡೇನೇ ಕಾದಿದ್ದೆ ನಡುರಾತ್ರೇನಾಗೆದ್ದು ಜೇಬಿಂದ ಈ ಪೊಟ್ಣ ತೆಗೆದು (ಕೈಲಿ ಪೊಟ್ಣವೊಂದನ್ನು ಹಿಡಿದು) ನೋಡಿಬಿಟ್ಟು, ಕಣ್ಣಿಗೊತ್ತಿ ಕೊಂಡು ತಿರುಗಿ ಅದನ್ನ ಭದ್ರವಾಗಿ ಮಡಗಿಕೊಂಡರು ನಂಗೆ ಗುಮಾನಿ ಬಂದು, ಬೆಳಗಿನಜಾವ ಅವರಿಗೆ ನಿದ್ದೆ ಅತ್ತಿದಾಗ, ಚಿಕ್ಕವ್ವಾವರು ಅಡಿಗೇ ಮನ್ಯಾಗೆ ಪೂಜೇಗಣೀಮಾಡ್ಕೋತಿದ್ದಾಗ ನಾನು ಮೆಲ್ಲಗೋಗಿ ಜೇಬಿಂದ ಆ ಪೊಟ್ಣತಕೊಂಡು ನಂತಾವ ಮಡೀಕೊಂಡು, ಅದ್ರಂಗೇಇರೋಇನ್ನೊಂದು ಸಕ್ಕರೇಪೊಟ್ಣ ಅದೇ ಜೇಬಿನಾಗೆ ಮಡಗಿಬಿಟ್ಟು ಸುಮ್ಕೆ ಇದ್ಬೋಗಿಬಿಟ್ಟೆ

**ರತ್ನ**— (ಆತುರತೆಯಿಂದ) ಹಾಗಾದರೆ ಇದು ವಿಷವಲ್ಲ?— ಸಕ್ಕರೆಯೋ?

**ಬಸವ**— ಔದೂತಾಯಿ! ಗೌರಮ್ಮನಾಣೆಗೂ! ಎಳ್ಡು ದಿನದಿಂದ ರಾಯರನ ನೆಳ್ಳನಂಗೆ ಕಾಯುತಾ ಇದೀನಿ.

[ಶಾಮಣ್ಣನು ಹೊರಳುವ ಸಂಜ್ಞೆ. ರತ್ನಮ್ಮನು ಆತುರಳಾಗಿ ಆ ಮುಖದಬಳಿ ಮುಖವಿಟ್ಟು ಬಿಕ್ಕುತ್ತಾ ಏನೇನೋ ಪಿಸುಗುಟ್ಟುತ್ತಾ ಇರುವಳು]

**ಶಾಸ್ತ್ರಿ**— ಶಾಮಣ್ಣಾ!... ಬಸವಯ್ಯಾ! ನಾನಾಡ ಮಾತನ್ನ ಕ್ಷಮಿಸು, ಆದರೆ ಸಕ್ಕರೆ ನುಂಗಿ ಹೀಗೆ ಮೂರ್ಛೆಹೋದನೇ?

**ಬಸವ**— ತಾವೂ ಚಿಕ್ಕವ್ವಾವರೂ ಬತ್ತಿದೀರಿ ಅಂತ ಏಳಿದ್ದಕ್ಕೆ, ಆ

ಶಕ್ಕರೆ ನುಂಗಿಬಿಟ್ಟವರೆ ಇಸಾಂತ, ಏನಾಗಿಲ್ಲ, ಗಾಬರೀಗಂಗೆ ಸೊಕ್ಕಿಬಿಟ್ಟ ನರೆ ಅಷ್ಟು ಸುಲುಬಾನಾ ಬುದ್ದೀ, ದೇವರಿಷ್ಟಕ್ಕೆ ಇರುದ್ಧವಾಗಿ ಪ್ರಾಣ ಬಿಡೋದು? ಒಸೀ ಪಾನಕಾ ಗೀನಕಾ ಕುಡಿಸಿ; ಎದ್ದುಬಿಡುತಾರೆ ಆಗೋ ವಾನೇಸಲ್ಲಿ ಅನ್ನೆರಡುಗಂಟೆ ಒಡೀತಾ ಐತೆ, ಬಸ್ಸು ಬಂದೊತ್ತಾಗಿರಬೋದು. ಬುದ್ದೀ! ನಾನೋಗಿ ನಂಜಯ್ಯಾ, ಅವ್ವಾವರನ್ನ ನೋಡಿಕೊಂಡು ಬರುತೀನಿ ಆಗೋ! (ಅರಳಿದ ಮುಖದಿಂದ) ಬುದ್ದಿಯೋರು ಒರಳ್ತಾ ಅವರೆ, ಒಸಿ ಪಾನಕ ಕುಡಿಸಿಬಿಡಿ (ನಿಷ್ಕ್ರಮಣ)

**ಶಾಸ್ತ್ರಿ**—(ಸಂತೋಷದಿಂದ) ಪಾನಕ ಇದೆಯೇನಮ್ಮ ಒಳಗಡೆ?

**ರತ್ನ**—ದೇವರ ಹತ್ತಿರ ಇದೆ ತರುತೇನೆ—

**ಶಾಸ್ತ್ರಿ**—ನೀನಿಲ್ಲೇ ಶಾಮೂನ ನೋಡಿಕೋ, ನಾನು ಹೋಗಿ ತರುತೇನೆ. (ಒಳಕ್ಕೆ ಹೋಗುವನು)

**ರತ್ನ**—(ಮುಖದಹತ್ತಿರ ಮೆಲ್ಲನಿಯಲ್ಲಿ ದೈನ್ಯದಿಂದ) ಇನ್ನು ಅವರಿಗೆ ಮುಖ ಹೇಗೆ ತೋರಿಸಲಿ! ಬೇಗ ಎದ್ದುಬಿಡಿ! (ಪಾದಗಳನ್ನಪ್ಪಿ) ನಿಮ್ಮ ನಮ್ಮಯ್ಯ! ನನ್ನದು ಶತಾಪರಾಧವಾಯಿತು!

**ಶಾಸ್ತ್ರಿ**—(ಪಾನಕ ತಂದು) ಕುಡಿಸಮ್ಮ ಸ್ವಲ್ಪ ಸ್ವಲ್ಪವೇ! (ರತ್ನಮ್ಮನು ಕುಡಿಸುವಳು. ಶಾಮಣ್ಣನು ಮೆಲ್ಲಗೆ ಕಣ್ಣು ಬಿಡುವನು)

**ರತ್ನ**—(ಆನಂದದಿಂದ) ನನ್ನ ಜೀವನ ಸೌಭಾಗ್ಯದ ಸೂರ್ಯೋದಯವಾಯಿತು ನನ್ನ ಮಾಂಗಲ್ಯದ ಸಿರಿದೇವಿಯು ಪ್ರಸನ್ನಳಾದಳು.

**ಶಾಸ್ತ್ರಿ**—ಶಾಮೂ! ಶಾಮಣ್ಣಾ! ಶಾಮಣ್ಣಾ!

**ಶಾಮು**—ಹಂ!

**ಶಾಸ್ತ್ರಿ**—ಇನ್ನು ಸ್ವಲ್ಪ ಪಾನಕ ಕುಡೀತೀಯಾಪ್ಪಾ?

**ಶಾಮು**—ಬೇಡ! ಈ ಕಷ್ಟಗಳಿಂದಲೇ ಪಾರಾಗ ಬೇಕೊಂತಿದ್ದ ನನಗೆ ಯಾರೋ ದ್ರೋಹಮಾಡಿ. ...

**ಶಾಸ್ತ್ರಿ**—ವಿಷದಪೊಟ್ಣ ಕದ್ದು ಅದರ ಜಾಗದಲ್ಲಿ ಸಕ್ಕರೇಪೊಟ್ಣ ಇಟ್ಟಿದ್ದರು.

**ಶಾಮು**—ಹಾಗೆ ಮಾಡಿದ ಆ ದ್ರೋಹಿ ಯಾರು?

[ಬಸವಯ್ಯ, ಗಂಟನ್ನೆತ್ತಿಕೊಂಡು ನಂಜಯ್ಯ ಮತ್ತು ಪಾತಮ್ಮನ ಪ್ರವೇಶ. ಪಾತಮ್ಮನು ಬೇಗ ಬಂದು ಶಾಮಣ್ಣನ ತಲೆಯಬಳಿ ಕುಳಿತು ತಲೆಯನ್ನು ಸವರಿಸುವಳು, ರತ್ನಮ್ಮನು ಗಾಳಿ ಹಾಕುತ್ತಿರುವಳು.]

**ಬಸವ**— ನಾನೇ ಬುದ್ದೀ! ತಾಸೀಲ್ದಾರ ಕಿಟ್ಟಪ್ಪನೋರ ವಾಶಕ ಒಂದೇ ಒಂದಾಗುಳಿದಿತೋ ಬೆಳಕು ಆರೋದನ್ನ ನೋಡೋಕಾಗದೆ, ಇಂ ಮಾಡಿದೆ ಬುದ್ದೀ! ಇದರಾಗೇನು ತಪ್ಪಿದ್ದರೂ ಮನ್ನಿಸಬೇಕು

**ರತ್ನ**— ನೀನೇ ನನ್ನ ಮಾಂಗಲ್ಯಾನುಳಿಸಿದ ನನ್ನ ಭಾಗದ ಗೌರಮ್ಮ

**ಪಾತು**— ಬಸವಯ್ಯನಿಂದ ಎಲ್ಲಾ ಸಮಾಚಾರವೂ ತಿಳೀತು ದೇವ ದಯೆಯಿಂದ ಅಪ್ಪನಾಶೀರ್ವಾದದಿಂದ ಒಂದುದೊಡ್ಡ ಗಂಡಾಂತರದಿಂ ನಾವೆಲ್ಲಾ ಪಾರಾದೆವು ಶಾಮೂ! ನೀನು ಎಂಥಾ ಹೆಂಗರುಳೊ

**ಶಾಮ**— (ನಿಧಾನವಾಗಿ ಏಳುತ್ತಾ) ಪಾತೂ! ನೀನು ಬಂದುಬಿಟ್ಟಿ ನನಗಿನ್ನು ಮುಂದಾಗೋ ಸೆರೆಮನೆವಾಸದ ಭಯ ಸ್ವಲ್ಪವೂ ಇಲ್ಲ.

**ಶಾಸ್ತ್ರಿ**— ಶಾಮೂ! ನೀನು ಅದರ ಯೋಚನೆ ಬಿಡು ನಾನು ಹ ನ್ನೈದು ರೂಪಾಯಿ ತಗೊಂಡುಹೋಗಿ ಸೆಕ್ರೆಟರಿಗಳ ಕೈಗೆ ಕೊಟ್ಟು, ಆ ಹಣ ಜಾಗದಲ್ಲೇ ಇಟ್ಟು ಈ ವಿಚಾರ ನಾವು ಹೊರತು ಬೇರೆಯವರ ಕಿವಿ ಬೀಳದೇ ಇರೋದಕ್ಕೆ ಅವರ ತಂದೆ ಆಣೆ ಇಡಿಸಿ ಬಂದಿದೀನಿ ನೀ ನಿಶ್ಚಿಂತೆಯಾಗಿರು

**ಶಾಮ**— ನಿಮಗೀಸುದ್ದಿ ಹೇಗೆ ತಿಳಿಯಿತು?

**ಶಾಸ್ತ್ರಿ**— ಅನುಮಾನದಿಂದ ಊಹಿಸಿ ನಿಶ್ಚಯ ಮಾಡಿದೆವು.

**ನಂಜ**— (ಬಾಗಿಲಕಡೆ ನೋಡಿ) ಬುದ್ದೀ! ನಮ್ಮ ರಾಯರು ತೂ ಡುತಾ ಬತ್ತಾವರೆ ಒಳೀಕೆ. ಎಲ್ಲೋ ಉಚ್ಚಿಗೆ ತಿರುಗಿಬಿಟ್ಟಿರಬೋದು

**ಶಾಸ್ತ್ರಿ**— ಪಾತಮ್ಮ! ರಂಗನಾಥರಾಯ ಬರೋಹಾಗಿದೆ ಆ ಉಂಗ ತಗೆದು ಕೊಟ್ಟುಬಿಡಮ್ಮ

**ಪಾತು**— ನೀವೇ ಕೊಟ್ಟುಬಿಡಿ ನಾನು ಅವನ ಮುಖ ನೋಡೋ

[ಉಂಗುರ ಕೊಟ್ಟು ಒಳಕ್ಕೆ ಹೊರಟುಹೋಗುವಳು]

**ರಂಗ**— (ತಲೆ ಕೆದರಿ ಹರಕು, ಕೊಳಕು ಬಟ್ಟೆಗಳಿಂದ ಕೂ ಪ್ರವೇಶಿಸಿ) ಉಂಗುರ' ಉಂಗುರ' ನನ್ನುಂಗುರು' ಹನ್ನೆರಡುಗ

ಯಾಯಿತು ! ಶಾಸ್ತ್ರಿಗಳೇ ! ಎಲ್ಲಿ ನನ್ನ ಉಂಗುರ ?

**ಶಾಸ್ತ್ರಿ**— ರಾಯರೇ ! ಬಹಳ ಬಳಲಿರೋಹಾಗಿದೆ ಬನ್ನಿ ! ಸ್ವಲ್ಪ ಸುಧಾರಿಸಿಕೊಳ್ಳಿ !

**ರಂಗ**— ಇಲ್ಲ ! ನನ್ನುಂಗುರ ಕೊಟ್ಟುಬಿಡಿ! ನಾನೆಲ್ಲಾದರೂ ಬಹು ದೂರ ಯಾರಿಗೂ ಕಾಣಿಸದಹಾಗೆ ಹೊರಟುಹೋಗುತೀನಿ

**ಪಾತು**— ಕೊಟ್ಟುಬಿಡಿ ಶಾಸ್ತ್ರಿಗಳೇ— ತಗೊಳ್ಳಿ

**ಶಾಸ್ತ್ರಿ**— ತಗೊಳ್ಳಿ. (ಉಂಗುರವನ್ನು ಕೊಡುವನು)

**ರಂಗ**— (ಕೈಲಿ ಹಿಡಿದು ಅದನ್ನೇ ದುರದುರನೆ ನೋಡುತ್ತಾ) ನನ್ನುಂಗರ ಕೈಗೆ ಬಂತು ! ನನ್ನ ಗುರು ನನ್ನ ಕೈನೇರಿದ ! ನನ್ನುಂಗುರ! ಹ ಹ್ಹ ಹ್ಹಾ ! ನನ್ನುಂಗುರಾ ! (ಹಾಗೆಯೆ ನಿಷ್ಕ್ರಮಿಸುವನು ಪಾತು ಬಂದು ರಾಮಣ್ಣನಹತ್ತಿರ ನಿಲ್ಲುವಳು)

**ನಂಜ**— ಬುದ್ಧೀ ! ಅವರ ಮೈಲಿ ಬೋ ಕೆಟ್ಟ ಕಾಯಿಲೆ ಐತೆ ಬುದ್ಧೀ!

**ಶಾಸ್ತ್ರಿ**— ನಂಜಯ್ಯಾ ! ನೀನು ಅವರ ಹಿಂದೆಯೇ ನಡೆ— ಸ್ವಲ್ಪ ನೋಡಿಕೋ ಪಾಪ—ನಾನೂ ಬಂದೆ

[ನಂಜಯ್ಯನ ನಿಷ್ಕ್ರಮಣ]

**ರಾಮು**— ರತ್ನ! (ತಲೆಯನ್ನು ನೇವರಿಸುತ್ತಾ) ನಿನ್ನ ವ್ರತ ಸಾಂಗವಾಗಿ ನೆರವೇರಿತೇ ?

**ರತ್ನ**— (ಅವನ ಪಾದಗಳನ್ನು ಹಿಡಿದು) **ನೀವೇ ನನ್ನ ವ್ರತ! ನೀವೇ ನನ್ನ ಮಾಂಗಲ್ಯ ! ನೀವೇ ನನ್ನ ಸರ್ವಶ್ವ! ನಿಮ್ಮ ಸೇವೇಯೇ ನನ್ನ ನಿತ್ಯ ಪೂಜೇ !!** (ನಮಸ್ಕರಿಸುವಳು)

**— ಮಂಗಳಂ —**



**ಶ್ರೀ ಸದಾಶಿವಯ್ಯ**ನವರ ಮೊದಲನೇ ನಾಟಕವಾದ "**ಮೈಸೂರ ಮಾಣಿಕ್ಯ**" ೧೯೩೭ರಲ್ಲಿ **ಬೆಳಕಿಗೆ ಬಂದು** ಅಂದಿನ ನಾಟಕ **ಪ್ರೇಮಿಗಳ ಆದರಕ್ಕೆ** ಪಾತ್ರವಾಗಿ ಮೆಚ್ಚುಕೆ ಪಡೆಯಿತು ಆ ಉತ್ತೇಜನದಿಂದ ಪ್ರಾರಂಭ ವಾದ ಇವರ ನಾಟಕ ರಚನೆ ಇದುವರೆಗೂ ನಡೆಯುತ್ತಾ ಬಂದು, ಈ ವೇಳೆಗೆ ಸುಮಾರು ಇಪ್ಪತ್ತು ನಾಟಕಗಳನ್ನು ರಚಿಸಿ, ಆಡಿಸಿ ರಂಗಭೂಮಿಗೆ ಸೇವೆ ಸಲ್ಲಿಸಿದ್ದಾರೆ.

ಇವರ ನಾಟಕಗಳನ್ನು ಮದರಾಸು, ಬೊಂಬಾಯಿ, ಕಲ್ಕತ್ತಗಳಲ್ಲಿನ ಕನ್ನಡಿಗರು ಪ್ರೇಮದಿಂದ ಅಭಿನಯಿಸಿ ಅಲ್ಲಿ ನಾಟಕ ಪ್ರೇಮಿಗಳನ್ನು ತಣಿಸಿದ್ದಾರಲ್ಲದೆ, **ಶ್ರೀ ಸದಾಶಿವಯ್ಯ**ನವರೇ ಸ್ವತಃ ತಮ್ಮ (ಗೆಳೆಯ ರೊಂದಿಗೂ ಮತ್ತೂ ಯುನೈಟೆಡ್ ಆರ್ಟಿಸ್ಟ್‌ರೊಂದಿಗೂ) ಧಾರವಾಡ, ಹುಬ್ಬಳ್ಳಿ, ಗದಗ್, ಬೆಂಗಳೂರು, ಚಿಕ್ಕಮಗಳೂರು, ಚನ್ನಪಟ್ಣ, ಕೋಲಾರ ತುಮಕೂರು ಮುಂತಾದ ಸ್ಥಳಗಳಲ್ಲೆಲ್ಲಾ ತಮ್ಮ ನಾಟಕಗಳನ್ನು ಅಭಿನಯಿಸಿ ಕೀರ್ತಿಗಳಿಸಿದ್ದಾರೆ. ಇವರ ಹತ್ತಾರು ನಾಟಕಗಳು ಮದ್ರಾಸು, ಮೈಸೂರು ರೇಡಿಯೋ ಕೇಂದ್ರಗಳಿಂದ ಪ್ರಸಾರವಾಗಿವೆ; ಆಗುತ್ತಿವೆ

ಮಕ್ಕಳ (ಕಿರಿಯರ) ನಾಟಕಗಳನ್ನು ರಚಿಸುವುದರಲ್ಲಿ ಇವರಿಗೆ ಪ್ರೇಮ **ಶ್ರೀ ಸದಾಶಿವಯ್ಯ**ನವರು ತಮಗೆ ಸಹಜವಾದ ಲಲಿತ ಶೈಲಿಯಲ್ಲಿ ಅನೇಕ ಚಿಕ್ಕ ದೃಶ್ಯಗಳನ್ನು ಬರೆದು ಬಾಲಕ ವರ್ಗಕ್ಕೆ ಉಪಕಾರ ಮಾಡಿದ್ದಾರೆ.